Vol - 12 October 2013 Issue No. 10 ₹ 10.00/-





# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*




ಾಂಕ 29 ಸೆಪ್ಟೆಂಬರ್ 2013 ರಂದು ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ 95ನೇ ರಾಜ್ಯ ಪತ್ತಿನ ಸಭೆಯಲ್ಲಿ ಭಾಗವಹಿಸಿದ ರಾಜ್ಯದ ಮಾಜಿ ಮುಖ್ಯಮಂತ್ರಿಗಳು ಹಾಗೂ ಸಂಸ್ಥೆಯ ಅಧ್ಯಕ್ಷರಾದ ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ, ಟಣ ಸಮಿತಿ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ, ವಿಧಾನ ಪರಿಷತ್ ಸದಸ್ಯ ಮಾನ್ಯ ಶ್ರೀ ವೈ.ಎ. ನಾರಾಯಣಸ್ವಾಮಿ, ರಾಜ್ಯ ಮುಖ್ಯ ಯುಕ್ತ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪ, ರಾಜ್ಯ ಗೈಡ್ಸ್ ಆಯುಕ್ತೆ ಶ್ರೀಮತಿ ಶಾಂತ ವಿ. ಆಚಾರ್ಯ, ಉಪಾಧ್ಯಕ್ಷೆ ಶ್ರೀಮತಿ ಭಾರತಿ ಚಂದ್ರಶೇಖರ್, ್ಯ ಕಾರ್ಯದರ್ಶಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಕೋಶಾಧಿಕಾರಿ ಶ್ರೀ ಟಿ. ಪ್ರಭಾಕರ್ ಚಿತ್ರದಲ್ಲಿದ್ದಾರೆ.



ಷ್ಟ್ರಪತಿ ಗೈಡ್ ಪ್ರಶಸ್ತಿ ಪಡೆದ ತುಮಕೂರು ಜಿಲ್ಲೆಯ ಸ್ಫೂರ್ತಿ ಶಾನುಬೋಗ್‌ಗೆ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಾನು ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದ ಟಿ.ಬಿ. ಜಯಚಂದ್ರರವರು ಸನ್ಮಾನಿಸಿದರು. ಚಿತ್ರದಲ್ಲಿ ಶಾಸಕರಾದ ರಫೀಕ್ ಅಹಮದ್, ಉಪನಿರ್ದೇಶಕರಾದ ಶ್ರೀ ಬಿ. ಮೋಹನ್ ಾರ್ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.



ಬಿಜಾಪುರ ಜಿಲ್ಲಾ ಶ್ರೀಮತಿ ವಾಸಂತಿಬಾಯಿ ಜಿಗಜಿನ್ನಿ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರದ ನಿರ್ಮಾಣದ ಶಿಲಾನ್ಯಾಸದ ಉದ್ಘಾಟನೆಯನ್ನು ಮಾನ್ಯ ಜಲಸಂಪನ್ಮೂಲ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಮ್.ಬಿ. ಪಾಟೀಲರವರು ನೆರವೇರಿಸಿದರು. ಚಿತ್ರದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.

ರಾಜ್ಯ ಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ ಮತ್ತು ರಾಜ್ಯ ಗೈಡ್ಸ್ ಆಯುಕ್ತರಾದ ಶ್ರೀಮತಿ ಶಾಂತ ವಿ. ಆಚಾರ್ಯ ಅವರುಗಳು ದೀಪ ಬೆಳಗಿಸಿ ರಾಜ್ಯ ಪರಿಷತ್ ಸಭೆಯನ್ನು ಉದ್ಘಾಟಿಸಿದರು.







ದಿ. 3 ರಿಂದ 9 ಅಕ್ಟೋಬರ್ 2013 ರವರೆಗೆ ಸಿರಿಗೆರೆ ಶ್ರೀ ತರಳಬಾಳು ಜಗದ್ಗುರು ವಿದ್ಯಾಸಂಸ್ಥೆ ಮತ್ತು ಚಿತ್ರದುರ್ಗ ಜಿಲ್ಲಾ ಸಂಸ್ಥೆಗಳ ಸಂಯುಕ್ತಾಶ್ರಯದಲ್ಲಿ ಸಂಸ್ಥೆಯ ಶಿಕ್ಷಕ–ಶಿಕ್ಷಕಿಯರಿಗೆ, ಸ್ಕೌಟ್ ಮಾಸ್ಟರ್, ಕಬ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳ ಮೂಲತರಬೇತಿ ನೀಡಿದ ಸಂದರ್ಭದಲ್ಲಿ ಶಿಬಿರಾರ್ಥಿಗಳು ಮತ್ತು ನಾಯಕರುಗಳೊಂದಿಗೆ ಶ್ರೀಶ್ರೀಶ್ರೀ ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳನ್ನು ಕಾಣಬಹುದು.

**2012–13 ನೇ ವರ್ಷದಲ್ಲಿ ಉತ್ತಮ ಕಾರ್ಯನಿರ್ವಹಣೆ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಪರ್ಯಾಯ ಫಲಕಗಳನ್ನು ಹಾಗೂ ಪಾರಿತೋಷಕಗಳನ್ನು ಕೆಳಕಂಡ ಜಿಲ್ಲೆಗಳಿಗೆ ದಿನಾಂಕ 29.09.2013 ರಂದು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ 95ನೇ ರಾಜ್ಯ ಪರಿಷತ್ ಸಭೆಯಲ್ಲಿ ವಿತರಿಸಿ ಅಭಿನಂದಿಸಲಾಯಿತು.**



ಪ್ರಥಮ ಸ್ಥಾನ : **ದಕ್ಷಿಣ ಕನ್ನಡ ಜಿಲ್ಲೆ**
ಅಬ್ದುಲ್ ಗಫಾರ್ ಪರ್ಯಾಯ ಫಲಕ



ದ್ವಿತೀಯ ಸ್ಥಾನ : **ದಾವಣಗೆರೆ ಜಿಲ್ಲೆ**
ಜಸ್ಟೀಸ್ ಕೆ. ಶಂಕರನಾರಾಯಣರಾವ್ ಪರ್ಯಾಯ ಫಲಕ



ತೃತೀಯ ಸ್ಥಾನ : **ಉಡುಪಿ ಜಿಲ್ಲೆ**
ಮೇಜರ್ ವೈ.ವಿ.ಕೆ. ಮೂರ್ತಿ ಪರ್ಯಾಯ ಫಲಕ

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಮಾನ್ಯರೇ,

2013–14 ರ ಅರ್ಧ ವರ್ಷ ಮುಗಿದಿದೆ. ಉಳಿದಿರುವ ಸಮಯಾವಕಾಶ ಅತ್ಯಲ್ಪ. ರಾಜ್ಯದ 33 ಜಿಲ್ಲಾ ಸಂಸ್ಥೆಗಳಲ್ಲಿ ಈ ವರ್ಷದಲ್ಲಿ ಇದುವರೆವಿಗೆ ಸ್ಕೌಟ್–ಗೈಡ್ ವಿಭಾಗದಲ್ಲಿ ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಿರುವ ಜಿಲ್ಲೆಗಳ ಸಂಖ್ಯೆ 7. ಇನ್ನೂ 26 ಜಿಲ್ಲೆಗಳು ತರಬೇತಿಗಳನ್ನು ಏರ್ಪಡಿಸಿಲ್ಲ. ಈಗಾಗಲೇ ರಾಜ್ಯ ಸಂಸ್ಥೆಯು ದಳಗಳ ನೊಂದಣಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಸ್ಕೌಟ್–ಗೈಡ್ ಚಳವಳಿಯನ್ನು ರಾಜ್ಯದೆಲ್ಲೆಡೆ ವಿಸ್ತರಿಸುವ ದೃಷ್ಟಿಯಿಂದ ಜಿಲ್ಲೆಗಳಿಗೆ ಗಣತಿಯ ವಿವರಗಳನ್ನು ನೀಡಲಾಗಿದೆ. ಅವಶ್ಯವಾಗಿ ಎಲ್ಲಾ ಜಿಲ್ಲೆಗಳ ಪದಾಧಿಕಾರಿಗಳು, ತರಬೇತಿ ನಾಯಕ–ನಾಯಕಿಯರು ಹಾಗೂ ಸ್ಥಳೀಯ ಸಂಸ್ಥೆಗಳ ಸಹೋದ್ಯೋಗಿಗಳು ಈ ಬಗ್ಗೆ ಸೂಕ್ತ ಕ್ರಮ ಜರುಗಿಸಿ, ಜನವರಿ 2014ರೊಳಗಾಗಿ ಮೂಲ ತರಬೇತಿಗಳನ್ನು ಪ್ರಾಯೋಜಿಸಬೇಕಾದ ಅವಶ್ಯಕತೆ ಬಗ್ಗೆ ನಿಮ್ಮ ಗಮನ ಸೆಳೆಯಬಯಸುತ್ತೇನೆ.

ಇನ್ನೊಂದು ಮಾತು. ರಾಜ್ಯದ 26 ಜಿಲ್ಲೆಗಳು ಏಕಸಮಯದಲ್ಲಿ ತರಬೇತಿಗಳನ್ನು ಯೋಜಿಸಿದಾಗ, ರಾಜ್ಯ ಸಂಸ್ಥೆಯ ಸ್ಕೌಟ್–ಗೈಡ್ ವಿಭಾಗಗಳ ತರಬೇತಿ ವಿಭಾಗದವರು ಸೂಕ್ತ ನಾಯಕ–ನಾಯಕಿಯರನ್ನು ಒದಗಿಸುವುದು ಕಷ್ಟಕರ ಎಂಬ ಅಂಶದ ಬಗ್ಗೆ ನಿಮ್ಮ ಗಮನಹರಿಸುತ್ತೇನೆ. ಆದುದರಿಂದ, ನೀವು ಕೂಡಲೇ ರಾಜ್ಯದ ತರಬೇತಿ ವಿಭಾಗಗಳ ಆಯುಕ್ತರುಗಳನ್ನು ಸಂಪರ್ಕಿಸಿ ನಿಮ್ಮ ಜಿಲ್ಲೆಗಳ ತರಬೇತಿಯನ್ನು ಯಶಸ್ವಿಗೊಳಿಸುವ ಬಗ್ಗೆ ತಕ್ಷಣ ಕಾರ್ಯಪ್ರವರ್ತರಾಗಬೇಕೆಂದು ಸೂಚಿಸುತ್ತೇನೆ.

ನವೆಂಬರ್–ಡಿಸೆಂಬರ್–ಜನವರಿ ತಿಂಗಳುಗಳಲ್ಲಿ ನಾವುಗಳು ಹಾಕಿಕೊಂಡಿರುವ ಎಲ್ಲಾ ಕಾರ್ಯಕ್ರಮಗಳನ್ನು ಕ್ರಿಯಾತ್ಮಕವಾಗಿ ಏರ್ಪಡಿಸುವ ಪ್ರಾಮಾಣಿಕ ಪ್ರಯತ್ನ ಮಾಡೋಣ ಎಂಬ ವಿಷಯವನ್ನು ಮತ್ತೊಮ್ಮೆ ನಿಮ್ಮ ಗಮನಕ್ಕೆ ತರಬಯಸುತ್ತೇನೆ. ತಕ್ಷಣ ಕಾರ್ಯಪ್ರವೃತ್ತರಾಗಿ 2013–14ರಲ್ಲಿ ಹೋದ ವರ್ಷಕ್ಕಿಂತ ಹೆಚ್ಚಿನ ದಳಗಳ ನೊಂದಣಿ ಹಾಗೂ ಗುಣಾತ್ಮಕ ತರಬೇತಿಗಳನ್ನು ಜರುಗಿಸಿ–ರಾಜ್ಯದ ಸ್ಕೌಟ್–ಗೈಡ್‌ಗಳ ಸಂಖ್ಯೆಯು 4 ಲಕ್ಷದ ಗುರಿ ಮುಟ್ಟುವಲ್ಲಿ ಶ್ರಮಿಸಬೇಕೆಂದು ಕೋರುತ್ತೇನೆ.

ಈ ತಿಂಗಳ 3 ರಿಂದ 9 ರ ವರೆಗೆ ಚಿತ್ರದುರ್ಗ ಜಿಲ್ಲಾ ಸಂಸ್ಥೆ ಹಾಗೂ ಶ್ರೀ ತರಳಬಾಳು ಜಗದ್ಗುರು ವಿದ್ಯಾಸಂಸ್ಥೆ, ಸಿರಿಗೆರೆ ಇವರ ಸಂಯುಕ್ತಾಶ್ರಯದಲ್ಲಿ ಮೂಲ ತರಬೇತಿ ಶಿಬಿರಗಳನ್ನು ಸಂಸ್ಥೆಯ ನೌಕರರುಗಳಿಗೆ ಏರ್ಪಡಿಸಿದ್ದು ತರಬೇತಿಯು ಯಶಸ್ವಿಯಾಗಿ ಜರುಗಿದೆ. ಸಂಸ್ಥೆಯ 13 ಜಿಲ್ಲೆಗಳಿಂದ, 133 ಶಿಕ್ಷಕ–ಶಿಕ್ಷಕಿಯರು ಶಿಬಿರದಲ್ಲಿ ಭಾಗವಹಿಸಿ ತರಬೇತಿ ಪಡೆದು ದಳಗಳನ್ನು ಶಾಲೆಗಳಲ್ಲಿ ಆರಂಭಿಸಿ ಯುವಕ–ಯುವತಿಯರಿಗೆ ಸೂಕ್ತ ತರಬೇತಿ ನೀಡುವುದಾಗಿ ಆಶ್ವಾಸನೆ ನೀಡಿರುತ್ತಾರೆ. ಶ್ರೀ ಕ್ಷೇತ್ರದ ಪೂಜ್ಯರು ಹಾಗೂ ವಿದ್ಯಾಸಂಸ್ಥೆಯ ಸಂಬಂಧಪಟ್ಟವರೆಲ್ಲರೂ ಸೂಕ್ತ ಸಲಹೆ–ಮಾರ್ಗದರ್ಶನ ನೀಡಿರುತ್ತಾರೆ. ಶಿಬಿರವನ್ನು ಯಶಸ್ವಿಗೊಳಿಸಲು ಸಹಕರಿಸಿದವರೆಲ್ಲರಿಗೂ ರಾಜ್ಯ ಸಂಸ್ಥೆಯ ಧನ್ಯವಾದಗಳು.

ಇದೇ ರೀತಿ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳು, ಜಿಲ್ಲೆಗಳಲ್ಲಿನ ವಿದ್ಯಾ ಸಂಸ್ಥೆಗಳ, ಸಂಘಗಳ ಸಂಪರ್ಕ ಬೆಳೆಸಿ, ಆ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಶಿಕ್ಷಕ-ಶಿಕ್ಷಕಿಯರುಗಳಿಗೆ ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸುವ ಪ್ರಾಮಾಣಿಕ ಪ್ರಯತ್ನ ಮಾಡಬೇಕಾಗಿ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳಿಗೆ ಸೂಚಿಸಬಯಸುತ್ತೇನೆ.

ಸೆಪ್ಟಂಬರ್ 9, 2013 ರಂದು ರಾಷ್ಟ್ರಪತಿ ಭವನ, ನವದೆಹಲಿಯಲ್ಲಿ ಜರುಗಿದ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳ ಪ್ರಮಾಣ ಪತ್ರ ಮತ್ತು ವಯಸ್ಕ ನಾಯಕರುಗಳ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಭಾರತದ ಗೌರವಾನ್ವಿತ ರಾಷ್ಟ್ರಪತಿಗಳಾದ ಶ್ರೀ ಪ್ರಣಬ್ ಮುಖರ್ಜಿ ಅವರು ಮಾಡಿದ ಆಂಗ್ಲ ಭಾಷಣದ ಕನ್ನಡ ಅನುವಾದವನ್ನು ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.

ಗೌರವಾನ್ವಿತ ರಾಷ್ಟ್ರಪತಿಗಳು, ಸ್ಕೌಟ್-ಗೈಡ್ ಚಳುವಳಿಯ ಬಗ್ಗೆ ಹೇಳಿರುವ ಹೃದಯಾಂತರಾಳದ ಮಾತುಗಳು, ಸಂಸ್ಥೆಯಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವ ಲಕ್ಷಾಂತರ ಸ್ವಯಂ ಸೇವಕರುಗಳಿಗೆ, ಯುವಕ-ಯುವತಿಯರಿಗೆ, ಚಳವಳಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಪದಾಧಿಕಾರಿಗಳಿಗೆ ಸ್ಫೂರ್ತಿ ನೀಡಿದ್ದು, ಇನ್ನೂ ಹೆಚ್ಚು ಕ್ರಿಯಾತ್ಮಕವಾಗಿ ಸ್ಕೌಟ್-ಗೈಡ್ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಸಹಕಾರಿಯಾಗಿದೆ. ಗೌರವಾನ್ವಿತರ ಮಾತುಗಳಾದ "ದೇಶವು ನಿಮ್ಮ ಬಗ್ಗೆ ಬಹಳ ಹೆಮ್ಮೆ ಪಡುತ್ತದೆ" ನೀವು ಅತ್ಯಂತ ಪ್ರಚೋದಕವು, ಸುಸಂಘಟಿತವು ಆದ ಅರ್ಪಣಾ ಮನೋಭಾವದ ಯುವಕ-ಯುವತಿಯರನ್ನು ಪ್ರತಿನಿಧಿಸಿತ್ತಿದ್ದೀರಿ ಹಾಗೂ "ಸಮರ್ಥ ಸ್ವಯಂ ಸೇವಾ ಸಂಸ್ಥೆ" ಎಂಬುದನ್ನು ಹಾಗೂ ರಾಜಕೀಯವಲ್ಲದ ಪ್ರಬುದ್ಧ ಹಾಗೂ ಪ್ರಗತಿಶೀಲ ಸಮಾಜ ನಿರ್ಮಾಣದ ಉಪಯುಕ್ತ ಕಾರ್ಯದಲ್ಲಿ ನಿರತರಾಗಿರುವುದನ್ನು ಸಮಾಜಕ್ಕೆ ತೋರಿಸಿರುತ್ತೀರಿ ಎಂಬ ದಾರ್ಶನಿಕ ನುಡಿಗಳು ನಮ್ಮೆಲರನ್ನು ಹುರಿದುಂಬಿಸುವುದಲ್ಲದೆ-ಹೆಚ್ಚಿನ ಆತ್ಮಸ್ಥೈರ್ಯ ನೀಡುತ್ತದೆ.

ರಾಜ್ಯ ಸರ್ಕಾರ, ಸಾರ್ವಜನಿಕ ಶಿಕ್ಷಣ ಇಲಾಖೆ, ಉನ್ನತ ಶಿಕ್ಷಣ ಇಲಾಖೆ ಹಾಗೂ ರಾಜ್ಯದ ಪಂಚಾಯತ್‌ರಾಜ್ ಸಂಸ್ಥೆಗಳಿಗೆ, ಮಾನ್ಯ ವಿಧಾನ ಸಭೆ-ವಿಧಾನ ಪರಿಷತ್ತಿನ ಸದಸ್ಯರುಗಳಿಗೆ, ಮಾನ್ಯ ಲೋಕಸಭೆ ಹಾಗೂ ರಾಜ್ಯ ಸಭೆಯ ಸದಸ್ಯರುಗಳಿಗೆ ಚಳವಳಿಯ ತರಬೇತಿ ಕೇಂದ್ರಗಳ ಮೂಲಭೂತ ಸೌಕರ್ಯಕ್ಕೆ ತಮಗೆ ಲಭ್ಯವಿರುವ ಕ್ಷೇತ್ರದ ಅಭಿವೃದ್ಧಿ ಕಾಮಗಾರಿಗಳಿಗಿರುವ ನಿಧಿಯಿಂದ ನೀಡುತ್ತಿರುವ ಸಹಾಯ, ಸಹಕಾರಕ್ಕೆ ಜಿಲ್ಲೆ ಹಾಗೂ ರಾಜ್ಯ ಸಂಸ್ಥೆಗಳ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

## ದಿನಾಂಕ 09–09–2013 ರಂದು ರಾಷ್ಟ್ರಪತಿ ಭವನ, ನವದೆಹಲಿಯಲ್ಲಿ 2011–12 ನೇ ಸಾಲಿನ ರಾಷ್ಟ್ರಪತಿ ಸ್ಕೌಟ್–ಗೈಡ್, ರೋವರ್–ರೇಂಜರ್‌ಗಳ ಪ್ರಮಾಣ ಪತ್ರ ಮತ್ತು ವಯಸ್ಕ ನಾಯಕರುಗಳ ಪ್ರಶಸ್ತಿಗಳ ಪ್ರದಾನ ಸಮಾರಂಭದಲ್ಲಿ ಭಾರತದ ರಾಷ್ಟ್ರಪತಿ ಗೌರವಾನ್ವಿತ ಶ್ರೀ ಪ್ರಣಬ್ ಮುಖರ್ಜಿ ಅವರು ಮಾಡಿದ ಭಾಷಣ

ಈ ದಿನ ನಿಮ್ಮೆಲ್ಲರನ್ನೂ ಭೇಟಿ ಮಾಡಿ, ಈ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಭಾಗವಹಿಸಲು ಸಂತೋಷಪಡುತ್ತೇನೆ.

1. 1961ರಿಂದಲೂ, ಕೀರ್ತಿವಂತರೂ ಹಾಗೂ ಭಾರತದ ಪ್ರಥಮ ರಾಷ್ಟ್ರಪತಿಗಳಾಗಿದ್ದ ಡಾ॥ ರಾಜೇಂದ್ರಪ್ರಸಾದ್ ಅವರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯೊಡನೆ ಸಂಪರ್ಕ ಹೊಂದಿದವರಾಗಿದ್ದು, ಈ ವರ್ಷದ 'ವಾರ್ಷಿಕ ಪ್ರಶಸ್ತಿ' ಪ್ರದಾನದ ಪರಂಪರೆ ಮುಂದುವರೆದುಕೊಂಡು ಬಂದಿದೆ. ನಿಮ್ಮಲ್ಲಿ ಅತ್ಯುನ್ನತ ಸಾಧನೆ ಮಾಡಿದವರನ್ನು ಈ ರೀತಿ ಗುರುತಿಸುವುದರ ಮೂಲಕ ಬಹಳ ಕಾಲದಿಂದಲೂ ಸ್ಕೌಟ್ಸ್‌ಗಳು ಮತ್ತು ಗೈಡ್ಸ್‌ಗಳಿಗೆ ಉತ್ತೇಜನ ಹಾಗೂ ಸ್ಫೂರ್ತಿ ನೀಡಿ, ಅವರು ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಸಮಾಜ ಸೇವೆಗಾಗಿಯೂ, ರಾಷ್ಟ್ರ ನಿರ್ಮಾಣಕ್ಕಾಗಿಯೂ, ಉಪಯೋಗಿಸಲು ಉತ್ತೇಜನ ನೀಡಿದೆ.
2. ಭಾರತದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಆಂದೋಳನವು, ರಾಷ್ಟ್ರಾದ್ಯಂತ ವ್ಯಾಪಕ ಬೆಳವಣಿಗೆ ಹೊಂದುವಲ್ಲಿ ಮತ್ತು ವಿಶ್ವದಾದ್ಯಂತ ಇತರ ರಾಷ್ಟ್ರಗಳ ಚಳವಳಿಗಳೊಂದಿಗೆ ಮೈತ್ರಿ ಮತ್ತು ಸಹಕಾರಗಳನ್ನು ಸಾದಿಸುವಲ್ಲಿ ಯಶಸ್ವಿಯಾಗಿರುವುದಕ್ಕಾಗಿ ನಿಮ್ಮನ್ನು ಪ್ರಶಂಸಿಸುತ್ತೇನೆ. ಸಂಸ್ಥೆಯ ಸದಸ್ಯತ್ವವು 51 ಲಕ್ಷಗಳ ದಾಖಲೆ ಸಾಧಿಸಿರುವುದು ನನಗೆ ಸಂತೋಷ ಉಂಟುಮಾಡಿದೆ. ಇದು ಭಾರತದ ಯುವಜನರು ಈ ಸಂಸ್ಥೆಯ ಬಗ್ಗೆ ಒಲವು ಮತ್ತು ಆಸಕ್ತಿಗಳನ್ನು ತೋರುತ್ತಿರುವುದನ್ನು ದೃಢಪಡಿಸುತ್ತದೆ. ಆ ಮೂಲಕ ಸಂಸ್ಥೆಯ ಧ್ಯೇಯವಾದ "ಸೇವೆ"ಯನ್ನು ರೂಢಿಸಿಕೊಂಡು, ರಾಷ್ಟ್ರದ ಸಮೈಕ್ಯತೆ ಮತ್ತು ಅಂತಾರಾಷ್ಟ್ರೀಯ ಬಾಂಧವ್ಯಗಳನ್ನು ಬೆಳೆಸುವವರಾಗಿರುತ್ತಾರೆ.
3. ಈ ಸದವಕಾಶವನ್ನುಪಯೋಗಿಸಿಕೊಂಡು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯಕ್ಕೆ ನನ್ನ ಸಂದೇಶವನ್ನು ನೀಡಬಯಸುತ್ತೇನೆ: "ದೇಶವು ನಿಮ್ಮ ಬಗ್ಗೆ ಬಹಳ ಹೆಮ್ಮೆ ಪಡುತ್ತದೆ" ನೀವು ಅತ್ಯಂತ ಪ್ರಚೋದಕವೂ, ಸುಸಂಘಟಿತವೂ ಆದ, ಅರ್ಪಣಾ ಮನೋಭಾವದ ಯುವಕರನ್ನು ಪ್ರತಿನಿಧಿಸುತ್ತಿದ್ದೀರಿ. ನೀವು ಸಮರ್ಥ ಸ್ವಯಂಸೇವಾ ಸಂಸ್ಥೆ ಎಂಬುದನ್ನೂ, ರಾಜಕೀಯವಲ್ಲದ ಪ್ರವೃತ್ತಿಯವರೆಂದೂ, ಪ್ರಬುದ್ಧ ಹಾಗೂ ಪ್ರಗತಿಶೀಲ ಸಮಾಜ ನಿರ್ಮಾಣದ ಉಪಯುಕ್ತ ಕಾರ್ಯದಲ್ಲಿ ನಿರತರಾಗಿರುವುದಾಗಿ ತೋರಿಸಿರುತ್ತೀರಿ.

4. "ದೇವರ ಸೇವೆ, ಇತರರಿಗೆ ಸೇವೆ ಮತ್ತು ಸ್ವಸೇವೆ" ಯ ನಿಮ್ಮ ಮಾರ್ಗದರ್ಶಕ ನೀತಿಯು ಸಚ್ಚಾರಿತ್ರ್ಯವನ್ನು ಮೂಡಿಸುವ ಆಧ್ಯಾತ್ಮಿಕ ತತ್ವಗಳನ್ನು ನಿಮ್ಮಲ್ಲಿ ಮೈಗೂಡಿಸಿದೆ. ಇದರಿಂದ ನಮ್ಮ ಸಮಾಜದಲ್ಲಿ ಪರಸ್ಪರ ಗೌರವ ಮತ್ತು ಸೋದರ ಭಾವನೆಗಳ ಮೌಲ್ಯಗಳನ್ನು ಹರಡಲು ನಿಮ್ಮನ್ನು ಪ್ರೇರೇಪಿಸುತ್ತಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಭಾಗವಹಿಸುವುದರ ಮೂಲಕ ನಿಮ್ಮ ಬೌದ್ಧಿಕ, ದೈಹಿಕ ಮತ್ತು ಆಧ್ಯಾತ್ಮಿಕ ಸಾಮರ್ಥ್ಯಗಳನ್ನು ಅರಿಯಲು ನಿಮಗೆ ಸಾಧ್ಯವಾಗುತ್ತದೆ.

5. ಬಂಧು, ಭಗಿನಿಯರೇ, ಇಂದು ತ್ವರಿತ ಗತಿಯಲ್ಲಿ ಬದಲಾಗುತ್ತಿರುವ ಸಮಾಜದಲ್ಲಿ ನಡೆಯುತ್ತಿರುವ ಸಾಮಾಜಿಕ ಸಂಘರ್ಷಗಳನ್ನು ನಾವೆಲ್ಲ ಕಾಣುತ್ತಿದ್ದೇವೆ. ಹಿಂದೆಂದೂ ಕಾಣದ ರೀತಿಯಲ್ಲಿ ನಮ್ಮ ದೇಶವು ಜನ ಸಾಂಖ್ಯಿಕ ಬದಲಾವಣೆಯನ್ನು ಕಾಣುತ್ತಿದೆ. 2020ರ ವೇಳೆಗೆ ಭಾರತೀಯನ ಸರಾಸರಿ ವಯಸ್ಸು ಕೇವಲ 29 ವರ್ಷಗಳಾಗಲಿದೆ. ಇದು, ನಾವು ನಮ್ಮ ಯುವಜನರ ಬಗ್ಗೆ ಗಮನ ಕೊಡಬೇಕಾದುದು ಎಷ್ಟು ಮುಖ್ಯ ಎಂಬುದರ ಸೂಚನೆಯಾಗಿದೆ. ನಾವು ಸಮಗ್ರ ಬೆಳವಣಿಗೆಯ ಬಗ್ಗೆ ಮಾತನಾಡುವಾಗ, ಮೂಲತಃ ನೆಲಮಟ್ಟದ ನಾಯಕರುಗಳೇ ಅಂತಹ ಪರಿವರ್ತನಕಾರರಾಗಿರುತ್ತಾರೆ. ಕೋನಾಕೃತಿಯ ಈ ವ್ಯವಸ್ಥೆಯಲ್ಲಿ ಅವಶ್ಯಕ ನಾಯಕತ್ವವನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು, ಸಮರ್ಥ ರೀತಿಯಲ್ಲಿ ಒದಗಿಸುವುದೆಂಬ ವಿಶ್ವಾಸ ನನಗಿದೆ.

6. ನಿಮ್ಮ ಚಳವಳಿಯಲ್ಲಿ "ಖರಿಕಮಾಯ್" ಕಾರ್ಯಕ್ರಮ ಒಂದು ಎಂದು ತಿಳಿದಿದ್ದೇನೆ. ನೀವು ಸಂಭಾವನೆಗಾಗಿ ಮಾಡುವ ಕೆಲಸದಿಂದ ಬರುವ ಹಣವನ್ನು ಸಂಬಂಧಪಟ್ಟ ಆಯಾ ಘಟಕಗಳ ಅಭಿವೃದ್ಧಿಗೇ ಉಪಯೋಗ ಮಾಡಿಕೊಳ್ಳುತ್ತಿದ್ದೀರಿ. ಈ ಸರಳ ಚಳುವಳಿಯಿಂದ ಗಾಂಧೀಜಿಯವರು ಒತ್ತಿ ಹೇಳುತ್ತಿದ್ದ ಒಂದು ಮಹತ್ವದ ಮೌಲ್ಯವಾದ "ಕಾಯಕದ ಗೌರವ" ದ ಬಗ್ಗೆ ನಿಮಗೆ ಅರಿವುಂಟಾಗುತ್ತದೆ.. ಎಳೆವಯಸ್ಸಿನಿಂದಲೇ ಇದನ್ನು ರೂಢಿಸಿಕೊಂಡಲ್ಲಿ, ನಿಮ್ಮಲ್ಲಿ ಆತ್ಮವಿಶ್ವಾಸ, ಸ್ವಾವಲಂಬನೆ ಮತ್ತು ಕರ್ತವ್ಯ ಪ್ರಜ್ಞೆಗಳನ್ನು ಪ್ರೇರೇಪಿಸುತ್ತದೆ.

7. ಭಾರತೀಯರಾಗಿ ನಾವು ಪ್ರಕೃತಿಯ ಬಗ್ಗೆ ತುಂಬ ಗೌರವಾದರಗಳ ಪರಂಪರೆಯನ್ನು ಪಡೆದಿದ್ದೇವೆ. ನಮ್ಮ ಅಮಿತವಾದ ಪ್ರಕೃತಿದತ್ತ ಮೂಲ ಸಂಪನ್ಮೂಲಗಳು ಮತ್ತು ಪರಿಸರಗಳನ್ನು ಸಂರಕ್ಷಿಸುವ ಮತ್ತು ಕಾಪಾಡಿಕೊಳ್ಳುವ ಸಾಮಾಜಿಕ ಚಟುವಟಿಕೆಗಳು ನನ್ನ ದೃಷ್ಟಿಯಲ್ಲಿ ಒಂದು ರಾಷ್ಟ್ರೀಯ ಕರ್ತವ್ಯ. ಈ ಕರ್ತವ್ಯದ ಬಗ್ಗೆ ಇನ್ನೂ ಹೆಚ್ಚು ಜಾಗೃತಿಯನ್ನು ಮೂಡಿಸುವ ಸಮಾಜದ ಪ್ರತಿಯೊಬ್ಬರೂ ಈ ಮುಖ್ಯ ಅವಶ್ಯಕತೆಯನ್ನು ಹೇಗೆ ನಿರ್ವಹಿಸಬಹುದು ಎಂಬ ಬಗ್ಗೆ ತಿಳುವಳಿಕೆ ಮೂಡಿಸುವಲ್ಲಿ ನೀವುಗಳು ಕಾರ್ಯಪ್ರವೃತ್ತರಾಗಿ ಗಮನಾರ್ಹ ಬದಲಾವಣೆ ತರಬಹುದು.

8. ಉನ್ನತ ಮಟ್ಟದ ಜೀವನವನ್ನು ನಡೆಸಬೇಕೆಂಬ ನಮ್ಮ ಹಂಬಲದ ಜೊತೆಗೆ, ಸಾಮಾಜಿಕ ವ್ಯವಸ್ಥೆಯ ಗುಣಮಟ್ಟವನ್ನೂ ಹೆಚ್ಚಿಸಬೇಕೆಂಬ ಗುರಿಯೂ ಇರಬೇಕೆಂದು ಒತ್ತಿಹೇಳುತ್ತೇನೆ. ನಮ್ಮ ನೆರೆಹೊರೆಯ

ಭಾವನೆಗಳ ಬಗೆಗೆ ಮತ್ತು ನಮ್ಮ ಮಾತು ಮತ್ತು ಕೃತಿಗಳಿಂದ ಅವರ ಮೇಲೆ ಹೇಗೆ ಪರಿಣಾಮ ಬೀರಬೇಕೆಂಬ ಬಗೆಗೆ ನಮಗೆ ಅತ್ಯಂತ ಎಚ್ಚರವಿರಬೇಕು. ನಮ್ಮ ಸಮಾಜಕ್ಕೆ ಮಾರಕವಾದ ಸಮಸ್ಯೆಗಳ ಬಗ್ಗೆ ಯೋಚಿಸಿ, ಅವುಗಳನ್ನು ತೊಡೆದುಹಾಕುವ ಮತ್ತು ಸಾಮಾಜಿಕ ಅಸಮತೆಯನ್ನು ನಿವಾರಿಸುವ ಪ್ರಯತ್ನಗಳ ಜೊತೆಗೆ, ಸಾಮಾಜಿಕ ಸೌಹಾರ್ದ ಮತ್ತು ಜಾತ್ಯಾತೀತೆಗಳನ್ನು ಕಾಪಾಡಿಕೊಂಡು ಬಂದಿರುವ ನಮ್ಮಲ್ಲಿ ಶತಮಾನಗಳ ಪಾರಂಪರಿಕ ಮೌಲ್ಯಗಳನ್ನು ಗುರುತಿಸಬೇಕು. ಈ ಮೌಲ್ಯಗಳನ್ನು ದೃಢಪಡಿಸಿಕೊಂಡು, "ವಸುಧೈವ ಕುಟುಂಬಕಂ" ಕಡೆ ಮುಂದುವರೆಯಬೇಕು. ಈ ನನ್ನ ಪರಂಪರೆಯಲ್ಲಿ ಭಾರತೀಯರಾದ ನಮಗೆ ಪೂರ್ಣ ವಿಶ್ವಾಸವಿರಬೇಕು. ಹಾಗೆಯೇ ನಮ್ಮ ಪ್ರಜಾಸತ್ತಾತ್ಮಕ, ಸಮಾಜದ ಸಹಿಷ್ಣುತೆ ಮತ್ತು ಸಮಾಜದ ವಿವಿಧ ವರ್ಗಗಳ ಸೌಹಾರ್ದತೆಗಳನ್ನು ವೃದ್ಧಿಸಲು ನಿರಂತರ ಪ್ರಯತ್ನ ನಡೆಸಬೇಕು. ನೀವು ಈ ದಿಕ್ಕಿನಲ್ಲಿ ಕೈಗೊಳ್ಳುವ ಪ್ರಯತ್ನವು ಯುವಜನರಲ್ಲಿ ದೇಶಾಭಿಮಾನವನ್ನು ವೃದ್ಧಿಸುತ್ತದೆಯಲ್ಲದೆ. ಸಂಕುಚಿತ ಭಾವನೆಗಳನ್ನು ತೊಡೆದು, ವಿಚ್ಛಿದ್ರಕಾರಕಶಕ್ತಿಗಳನ್ನು ಗುರುತಿಸಿ ದಮನ ಮಾಡುತ್ತದೆ. ವಾಸ್ತವವಾಗಿ ಸ್ಕೌಟ್ ಮತ್ತು ಗೈಡ್‌ಗಳ "ಮನಸಾ, ವಚಸಾ, ಕರ್ಮಣಾ ಪರಿಶುದ್ಧತೆ" ಎನ್ನುವುದು ನಿಯಮಾಂಶವು ಅತ್ಯುತ್ತಮ ತತ್ವವಾಗಿದೆ. ಈ ಹಿನ್ನೆಲೆಯಲ್ಲಿ ಸ್ಕೌಟುಗಳು, ಗೈಡುಗಳು, ರೋವರ್‌ಗಳು, ರೇಂಜರ್‌ಗಳಿಗೆ, ಹಿರಿಯ ನಾಯಕರುಗಳ ಮಾರ್ಗದರ್ಶನವಿರುವುದು ಅದೃಷ್ಟವೇ ಸರಿ.

9. ಉತ್ತರಖಂಡದಲ್ಲಿ ಇತ್ತೀಚೆಗೆ ಸಂಭವಿಸಿದ ಹಠಾತ್ ಭೀಕರ ಪ್ರವಾಹದ ಸಂದರ್ಭವೂ ಸೇರಿದಂತೆ ಸ್ಕೌಟ್ಸ್-ಗೈಡ್ಸ್‌ಗಳು ಅವಿಶ್ರಾಂತವಾಗಿ ನಡೆಸುತ್ತಿರುವ ಪ್ರಾಣರಕ್ಷಣೆ ಮತ್ತು ಪುನರ್ವಸತಿ ಸೇವಾಕಾರ್ಯವನ್ನು ನಾನು ತುಂಬ ಮೆಚ್ಚಿಕೊಂಡಿದ್ದೇನೆ, ಶ್ಲಾಘಿಸುತ್ತೇನೆ. ಅತ್ಯಂತ ಕಠಿಣ ಸಂದರ್ಭಗಳಲ್ಲೂ, ನೀವು ಮಂಚೂಣಿಯಲ್ಲಿರುತ್ತೀರಿ. ಕುಂಭಮೇಳದ ವೇಳೆ, ರೈಲ್ವೆ ಇಲಾಖೆ ಹಾಗೂ ಇತರ ಆಡಳಿತ ಸೇವೆಗಳಲ್ಲಿ ಸಹಾಯಕರಾಗಿರುತ್ತೀರಿ; ಶಾಲೆಗಳ ಪುನರ್ನಿಮಾಣ; ಪೋಲಿಯೋ ಲಸಿಕೆ ಕಾರ್ಯಕ್ರಮ, ತಂಬಾಕು ನಿಷೇಧ ಚಳವಳಿ; ಶೈಕ್ಷಣಿಕ ವಿಸ್ತರಣೆ; ಸಾಮಾಜಿಕ ಕಾರ್ಯಾಗಾರ ಮುಂತಾದ ಅನೇಕ ಯೋಜನೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದೀರಿ. ನಿಸ್ವಾರ್ಥ ಸೇವೆಗಾಗಿ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಪ್ರತಿಯೊಬ್ಬ ಸದಸ್ಯನಿಗೂ ಈ ಸಂದರ್ಭದಲ್ಲಿ ಧನ್ಯವಾದ ಹೇಳುತ್ತೇನೆ. ನೀವು ಕೈಕೊಳ್ಳುವ ಯಾವುದೇ ಉಪಕ್ರಮವೂ, ಇತರರಿಗೆ ಮಾದರಿಯಾಗಿ, ಸ್ಫೂರ್ತಿದಾಯಕವಾಗಿ, ನಿಮ್ಮಂತೆಯೇ ಅವರೂ ಪ್ರಾಮಾಣಿಕ ಹಾಗೂ ಅರ್ಪಣಾಭಾವದ ಸೇವೆ ಸಲ್ಲಿಸಲು ಪ್ರೇರಕವಾಗುತ್ತದೆಂದು ನಾನು ನಂಬಿದ್ದೇನೆ.

10. ಈ ಮಾತುಗಳೊಂದಿಗೆ, ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಹಿರಿಯ ನಾಯಕರುಗಳ ಶ್ಲಾಘನೀಯ ಹಾಗು ಅನುಪಮ ಸೇವೆಯನ್ನು ಸ್ಮರಿಸುತ್ತಾ ಪ್ರಶಸ್ತಿ ವಿಜೇತರನ್ನು ಮತ್ತೊಮ್ಮೆ ಅಭಿನಂದಿಸುತ್ತೇನೆ. ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಎಲ್ಲರನ್ನೂ ಅವರ ನಿರಂತರ ಯಶಸ್ಸು ಮತ್ತು ಪ್ರಯತ್ನಶೀಲತೆಗಾಗಿ ಅಭಿನಂದಿಸುತ್ತಾ, ಸಂಸ್ಥೆಯ ಎಲ್ಲಾ ಕಾರ್ಯಗಳಿಗೂ ಶುಭ ಹಾರೈಸುತ್ತೇನೆ. ಸಂಸ್ಥೆಯು ಹೆಚ್ಚು ಹೆಚ್ಚು ಸಮರ್ಥವಾಗಿ ಬೆಳೆಯಲಿ ಎಂದು ಆಶಿಸುತ್ತೇನೆ.

**ಜೈಹಿಂದ್**

ರಾಜ್ಯವಾರ್ತೆ..........

## NATIONAL ROVER/RANGER MOOT

### Held at Kondajji Basappa Scouts & Guides State Training & Camping Centre Kondajji, Davanagere Dist., Karnataka State From 26-30 Sept 2013

The National Rover/Ranger Moot was organized at State Training Centre, Kondajji, Karnataka State from 26th to 30th September 2013 in which 163 participants from 18 States of the Country participated i.e. Arunachal Pradesh- 05, Bihar-06, Central Railway-01, Chhattisgarh-08, Eastern Railway-05, Haryana-10, Kerala-06,Karnataka-53, Maharashtra-15, N.F.Railway-04, Rajasthan-11, S.C. Railway-05, Tamil Nadu-08, Tripura-04, Uttar Pradesh-04, Uttarakhand-05 and West Bengal-04 respectively.

The Moot was informally inaugurated on the 26th September afternoon after Registration and Flag Ceremony followed by Integration Sesion and Camp Tour.

The inaugural function of the Moot was held on 27th Morning in which Shri H.S.Shivashankar, Member, Karnataka Legislative Assembly, Harihar, Kondajji was present as a Chief-Guest and Shri Hanagavadi Veeresh, Member, Davangere Zilla Panchayat was present as a Guest-of-Honour and blessed the participants. Shri Kondajji B. Shanmukhappa, State Chief Commissioner, Bharat Scouts & Guides, Karnataka State was also present and presided over the function. Smt. Shantha V. Acharya, State Commissioner (G), BS&G, Karnataka was present as a special guest.

During the Moot participants actively participated in the Group Discussions, Youth Forum, Trekking Programme, Backwoodsman Cooking, Community Service Programme, Night Trekking, Star-Gazing, Skill based subjects and plantation programme etc. Subjects like Five Rocks of Rovering, What is Scouting/Guiding, Rover Scouting in India, Upa-Rashtrapati Award, Community Development Project, Venture Club, etc were also dealt.

On 28 September participants were also taken for the Educational Tour to Hampi to visit the historical places of interest and Zoological centre during which Hitch-Hike programme was also organized to study the flora and fauna of the area.

The Valedictory function and grand Camp-fire of the event was organized on 29 evening in which the participants presented various colorful cultural programmes depicting different traditional culture, Play-act on Community Development Project being under-taken by BS&G etc which was highly appreciable and laudable.

The Moot was successfully conducted under the leadership of Shri Amar B. Chettri, Assistant Director, Southern Region duly assisted by the invited Staff Members.

The Moot ended on 30 September after all faith Prayer, Open Session, Final Talk followed by Closing Ceremony, Lowering down the BS&G Flag and singing National Anthem.

**Amar B. Chettri**

**Asstt. Director/SR**

## 68th Himalaya Wood Badge Holders re-union

328 participants drawn from 29 districts and 09 Staff Members participated in the re-union, from 09th to 12th Oct. 2013 at Shanthivan, Prajapitha Brahma Kumaris Eswariya Vishwa Vidyalay. Mt. Abu. Rajasthan.

The Reunion was inaugurated by Rajayogi, B.K. Mrutyanjaya, Executive Secretary of the Vidyalaya, on 9th at 11 a.m. A Special Programme was designed for the Bharat Scouts and Guides. The Subjects like Exploring One's True Identity, Importnce of Values in daily life Life, Managing Skills, Education for stress free living, Harmony in Relationship, Experiencing the Divine Benefits of Rajayoga Meditation were dealt with In addition Scouting subjects like Fundamental of Scouting, Badge system, Prime shield competition, Public Relations, B.P. Six, Duty Change. Responsibilities of H.W.B. Holders were discussed. The authorities Felicitated Sri C.S. Reddy, Hon.S.T.C.(S)

## ರಾಷ್ಟ್ರಪತಿ ಸ್ಕೌಟ್ಸ್‌ಗಳ ಪರೀಕ್ಷಾ ಪೂರ್ವಸಿದ್ಧತಾ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ದಿ॥ 17-10-2013 ರಂದು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಇಲ್ಲಿ ರಾಷ್ಟ್ರಪತಿ ಸ್ಕೌಟ್‌ಗಳ ಪೂರ್ವಸಿದ್ಧತಾ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಕರ್ನಾಟಕದ ಈ ಕೆಳಕಂಡ ಜಿಲ್ಲೆಗಳಿಂದ ಸ್ಕೌಟ್‌ಗಳು ಭಾಗವಹಿಸಿದ್ದರು.

| | | | |
|---|---|---|---|
| 1) ಬೆಂಗಳೂರು ದಕ್ಷಿಣ ಜಿಲ್ಲೆ | 32 ಸ್ಕೌಟ್ಸ್, | 6) ಬಿಜಾಪುರ ಜಿಲ್ಲೆ | 02 ಸ್ಕೌಟ್ಸ್ |
| 2) ಉಡುಪಿ ಜಿಲ್ಲೆ | 14 ಸ್ಕೌಟ್ಸ್ | 7) ಹಾಸನ ಜಿಲ್ಲೆ | 02 ಸ್ಕೌಟ್ಸ್ |
| 3) ದಕ್ಷಿಣ ಕನ್ನಡ ಜಿಲ್ಲೆ | 12 ಸ್ಕೌಟ್ಸ್ | 8) ರಾಯಚೂರು ಜಿಲ್ಲೆ | 01 ಸ್ಕೌಟ್ಸ್ |
| 4) ಚಿಕ್ಕಮಗಳೂರು ಜಿಲ್ಲ | 12 ಸ್ಕೌಟ್ಸ್ | 9) ಧಾರವಾಡ ಜಿಲ್ಲೆ | 05 ಸ್ಕೌಟ್ಸ್ |
| 5) ದಾವಣಗೆರೆ ಜಿಲ್ಲೆ | 20 ಸ್ಕೌಟ್ಸ್ | | **ಒಟ್ಟು 108 ಸ್ಕೌಟ್ಸ್** |

ಶಿಬಿರದ ಸಿಬ್ಬಂದಿಯಾಗಿ ಶ್ರೀ ಟಿ.ಎ. ಮಂಜುನಾಥಾಚಾರ್, ಶ್ರೀ ಎಂ. ಪ್ರಭಾಕರ್‌ಭಟ್, ಶ್ರೀ ಚನ್ನಪ್ಪ, ಶ್ರೀ ರಿಯಾಜ್ ಪಾಷಾ, ಶ್ರೀ ಸಿದ್ಧಗಂಗಯ್ಯಾ ಇವರುಗಳು ಕಾರ್ಯನಿರ್ವಹಿಸಿದರು.

ಈ ಶಿಬಿರದಲ್ಲಿ ಪ್ರವೇಶ ಪರೀಕ್ಷೆಯಿಂದ ರಾಷ್ಟ್ರಪತಿ ಸ್ಕೌಟ್ಸ್ ಪದಕದ ವಿಷಯಗಳನ್ನು ಪುನರಾವರ್ತನೆ ಮಾಡಲಾಯಿತು.

ಊಟೋಪಹಾರ, ವಸತಿಯನ್ನು ರಾಜ್ಯ ಸಂಸ್ಥೆಯು ಏರ್ಪಡಿಸಿತ್ತು. ಶ್ರೀ ಟಿ.ಎ. ಮಂಜುನಾಥಾಚಾರ್, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್), ಮಲ್ಲೇಶಪ್ಪ, ಜಿಲ್ಲಾ ಸಂಘಟಿಕರು (ಸ್ಕೌಟ್ಸ್) ಗದಗ ಇವರು ಊಟ, ತಿಂಡಿ ವ್ಯವಸ್ಥೆಯ ಮೇಲ್ವಿಚಾರಣೆ ಮಾಡಿದರು.

# ರಾಷ್ಟ್ರಪತಿ ಸ್ಕೌಟ್ಸ್‌ಗಳ ಪರೀಕ್ಷಾ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನವದೆಹಲಿ ಮತ್ತು ದಕ್ಷಿಣ ಪ್ರಾಂತೀಯ ಕಛೇರಿ ಬೆಂಗಳೂರು ಹಾಗೂ ಕರ್ನಾಟಕ ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ದಿ॥ 18-10-2013 ರಿಂದ 22-10-2013 ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಇಲ್ಲಿ ರಾಷ್ಟ್ರಪತಿ ಸ್ಕೌಟ್‌ಗಳ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಕರ್ನಾಟಕ ರಾಜ್ಯದಿಂದ 108 ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

ದಕ್ಷಿಣ ರೈಲ್ವೆಯ 18 ಸ್ಕೌಟ್ಸ್‌ಗಳು ಕರ್ನಾಟಕದಿಂದ 10 ಸ್ಕೌಟ್ ಮಾಸ್ಟರ್, ದಕ್ಷಿಣ ಪ್ರಾಂತೀಯ ಸಂಘಟನಾ ಆಯುಕ್ತರು ಭಾ.ಸ್ಕೌ.-ಗೈ. ಹಾಗೂ 09 ಪರೀಕ್ಷಾ ಸಿಬ್ಬಂದಿ ಭಾಗವಹಿಸಿದ್ದರು.

| | |
|---|---|
| ಶ್ರೀ ಅನಲೇಂದ್ರಶರ್ಮಾ, | ಶಿಬಿರದ ನಾಯಕರು |
| ಶ್ರೀ ಷರೀಫ್ ಅಹಮದ್, ಆಂದ್ರಪ್ರದೇಶ | ಶಿಬಿರದ ಸಿಬ್ಬಂದಿ |
| ಶ್ರೀ ಜಿ. ಲಕ್ಷ್ಮೀ ನಾರಾಯಣ, ಆಂಧ್ರಪ್ರದೇಶ | ಶಿಬಿರದ ಸಿಬ್ಬಂದಿ |
| ಶ್ರೀ ಕೃಷ್ಣ, ಆಂಧ್ರಪ್ರದೇಶ | ಶಿಬಿರದ ಸಿಬ್ಬಂದಿ |
| ಶ್ರೀ ಎಂ.ಬಿ. ವಾಸು, ದಕ್ಷಿಣ ರೈಲ್ವೆ | ಶಿಬಿರದ ಸಿಬ್ಬಂದಿ |
| ಶ್ರೀ ಎಂ. ಶ್ರೀನಿವಾಸನ್, ದಕ್ಷಿಣ ರೈಲ್ವೆ | ಶಿಬಿರದ ಸಿಬ್ಬಂದಿ |
| ಶ್ರೀ ಭುವನೇಂದ್ರ ನಾಯರ್, ಕೇರಳ | ಶಿಬಿರದ ಸಿಬ್ಬಂದಿ |
| ಶ್ರೀ ಕೆ. ವೆಂಕಟರಾಮನ್, ತಮಿಳುನಾಡು | ಶಿಬಿರದ ಸಿಬ್ಬಂದಿ |

ಈ ಶಿಬಿರದಲ್ಲಿ ಪ್ರವೇಶ ಪರೀಕ್ಷೆಯಿಂದ ರಾಷ್ಟ್ರಪತಿ ಸ್ಕೌಟ್ಸ್ ಪದಕದ ವಿಷಯಗಳನ್ನು ಪರೀಕ್ಷಿಸಲಾಯಿತು. ಗಂಟುಗಳು, ಲ್ಯಾಶಿಂಗ್, ಲಾಗ್‌ಪುಸ್ತಕ, ಪ್ರಾವೀಣ್ಯತಾ ಪದಕ, ಗುಡಾರ ನಿರ್ಮಾಣ, ಕಂಪಾಸ್ ಸೆಟ್ಟಿಂಗ್, ಪ್ರಥಮ ಚಿಕಿತ್ಸೆ, ಬಿ.ಪಿ. ವ್ಯಾಯಾಮ, ಗುಡಾರ ತಪಾಸಣೆ, ಧ್ವಜಾರೋಹಣ, ಸರ್ವಧರ್ಮ ಪ್ರಾರ್ಥನೆ, ಸಮಾಜಸೇವೆ (ಶ್ರಮದಾನ) ಇವುಗಳನ್ನು ಪರೀಕ್ಷಿಸಲಾಯಿತು.

ಊಟೋಪಚಾರ, ವಸತಿಯನ್ನು ರಾಜ್ಯ ಸಂಸ್ಥೆಯು ಏರ್ಪಡಿಸಿತ್ತು. ಶ್ರೀ ಟಿ.ಎ. ಮಂಜುನಾಥಾಚಾರ್, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್), ಮಲ್ಲೇಶಪ್ಪ, ಜಿಲ್ಲಾ ಸಂಘಟಿಕರು (ಸ್ಕೌಟ್ಸ್) ಗದಗ ಇವರು ಊಟ, ತಿಂಡಿ ವ್ಯವಸ್ಥೆಯ ಮೇಲ್ವಿಚಾರಣೆ ಮಾಡಿದರು.

# ಜಿಲ್ಲಾ ವಾರ್ತೆಗಳು.................

## ದಾವಣಗೆರೆ

ದಿನಾಂಕ 17-08-2013 ರಿಂದ 19-08-2013 ರ ವರೆಗೆ ಜಿಲ್ಲಾ ಪುರಸ್ಕಾರ ಪರೀಕ್ಷಾ ಶಿಬಿರವನ್ನು ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ ಗೈಡ್ ತರಬೇತಿ ಕೇಂದ್ರ, ಕೊಂಡಜ್ಜಿ ಇಲ್ಲಿ ಆಯೋಜಿಸಲಾಗಿತ್ತು. ತೃತೀಯ ಚರಣ್ ಕಬ್ಸ್ 54, ಹಿರಕ್ ಪಂಕ್ ಬುಲ್‌ಬುಲ್ 45, ತೃತೀಯ ಸೋಪಾನ್ ಸ್ಕೌಟ್ಸ್ 154, ಗೈಡ್ಸ್ 134 ಹಾಗೂ 50 ಸ್ಕೌಟರ್ಸ್ ಗೈಡರ್ಸ್‌ಗಳು ಭಾಗವಹಿಸಿದ್ದರು.

ಸದರಿ ಶಿಬಿರದ ನಾಯಕರಾಗಿ ಕು. ಯಶೋದ, (ಕಬ್) ಶ್ರೀಮತಿ ಎಸ್. ಸಿದ್ಧಮ್ಮ (ಬುಲ್‌ಬುಲ್) ಶ್ರೀ ಜೆ.ಎಸ್. ವಿಜಯ್ (ಸ್ಕೌಟ್) ಶ್ರೀಮತಿ ತುಳಸಾಮಣಿ (ಗೈಡ್) ಇವರುಗಳು ವಹಿಸಿದ್ದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

## ಹಾಸನ

ದಿನಾಂಕ 11-09-2013 ರಂದು ರೋಟರಿ ಭವನದಲ್ಲಿ ರೋಟರಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳು ಸೇರಿದಂತೆ ಶ್ರೀ ವಿವೇಕಾನಂದ ಸ್ಕೌಟ್ ಟ್ರೂಪ್ ಉದ್ಘಾಟಿಸಲಾಯ್ತು. ಈ ಕಾರ್ಯಕ್ರಮವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್.ಪಿ. ನಟರಾಜ್ ಉದ್ಘಾಟಿಸಿ ಮಕ್ಕಳ ಸರ್ವಾಂಗೀಣ ವಿಕಾಸ ಮತ್ತು ಸೇವಾ ಮನೋಭಾವ ರೂಪಿಸಲು ಸ್ಕೌಟಿಂಗ್ ಶಿಕ್ಷಣ ಪೂರಕವಾಗಿದೆ ಎಂದರು.

ನಂತರ ಮಾತನಾಡಿದ ಕಾರ್ಯದರ್ಶಿ ಶ್ರೀ ಲೀಲಾಮಹೇಶ್ವರ್, ಸ್ಕೌಟಿಂಗ್ ಮತ್ತು ಗೈಡಿಂಗ್ ಇತಿಹಾಸ ಬೆಳೆದು ಬಂದ ಬಗ್ಗೆ, ಸ್ಕೌಟಿಂಗ್ ಶಿಕ್ಷಣದ ವೈಶಿಷ್ಟ್ಯತೆ ಹೇಗೆ ಸಹಕಾರಿ ಎಂಬುದನ್ನು ವಿವರಿಸಿದರು.

ಈ ಕಾರ್ಯಕ್ರಮದಲ್ಲಿ ಶ್ರೀ ಬಿ.ಕೆ. ಯೋಗೀಶಾಚಾರ್, ಎ.ಡಿ.ಸಿ., ಮತ್ತು ಸ್ಕೌಟ್ ಮಾಸ್ಟರ್ ಶ್ರೀ ಚೇತನ್ ಶರ್ಮ ಉಪಸ್ಥಿತರಿದ್ದರು. ರೋಟರಿ ಸಂಸ್ಥೆಯ ಮುಖ್ಯಸ್ಥರು ಮತ್ತು ರೋಟರಿ ಶಾಲೆಯ ಮುಖ್ಯಸ್ಥರು ಉಪಸ್ಥಿತರಿದ್ದರು. ಶ್ರೀ ಗೋವಿಂದರಾವ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

## ಉಡುಪಿ

ದಿನಾಂಕ : 20-09-2013 ರಿಂದ 21-09-2013 ರ ವರೆಗೆ ಜಿಲ್ಲಾ ಮಟ್ಟದ ಪ್ರವೀಣ್ ಪರೀಕ್ಷಾ ಶಿಬಿರವನ್ನು ಉಡುಪಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಕಾರಂತ ಕಲಾ ಗ್ರಾಮ, ಮಣಿಪಾಲ, ಉಡುಪಿ ಇಲ್ಲಿ ಸಂಘಟಿಸಲಾಯಿತು. ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಪಿ.ಅರ್. ನಾಯಕ್, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ ಇವರು ವಹಿಸಿದ್ದರು. ಪ್ರೊ. ಕು.ಸಿ. ಅಶ್ವತ್ಥಾಮ ಪ್ರಾಂಶುಪಾಲರು, ಸರಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಅಜ್ಜರಕಾಡು, ಉಡುಪಿ, ಶ್ರೀ ಡಾ.ಜಿ. ಶಂಕರ್ ಇವರು ದೀಪ ಬೆಳಗಿಸಿ ಶಿಬಿರವನ್ನು ಉದ್ಘಾಟಿಸಿದರು. ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು, (ಸ್ಕೌಟ್ಸ್) ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಆನಂದ ಅಡಿಗ (ಸ್ಕೌಟ್ಸ್) ಪ್ರಾಸ್ತಾವಿಕ ಮಾತುಗಳನ್ನಾಡಿದರು. ಶ್ರೀ ಎಂ. ಪ್ರಭಾಕರ ಭಟ್ ಸ್ವಾಗತಿಸಿದರು. ಶ್ರೀ ನಿತಿನ್ ಅಮೀನ್ ರೋವರ್ ಲೀಡರ್ ಧನ್ಯವಾದ ನೀಡಿದರು.

ಶಿಬಿರದಲ್ಲಿ ವಿವಿಧ ಕಾಲೇಜುಗಳಿಂದ 57 ರೋವರ್ ರೇಂಜರ್ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಶ್ರೀ ಕೊಗ್ಗ ಗಾಣಿಗ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಶ್ರೀ ವಿಕ್ರಂ ಸಿಂಗ್ ಸಹಾಯಕ ಲೀಡರ್ ಟ್ರೈನರ್ (ರೋವರ್) ಶ್ರೀ ಆನಂದ ಅಡಿಗ, ಲೀಡರ್ ಟ್ರೈನರ್ (ಸ್ಕೌಟ್ಸ್) ಶ್ರೀ ಎಂ. ಪ್ರಭಾಕರ ಭಟ್, ಶ್ರೀ ನಿತಿನ್ ಅಮೀನ್, ಜ್ಯೋತಿ ಆಚಾರ್ಯ, ರೇಂಜರ್ ಲೀಡರ್, ಕು. ಸುಶ್ಮಾ ಇವರುಗಳು ಶಿಬಿರದಲ್ಲಿ ಪರೀಕ್ಷಕರಾಗಿ ಭಾಗವಹಿಸಿದ್ದರು. ಶ್ರೀ ದಯಾನಂದ ಶೆಟ್ಟಿ ಹೆಡ್‌ಕ್ವಾಟ್ರರ್ಸ್ ಕಮೀಷಸನರ್ (ರೋವರ್) ಶಿಬಿರಕ್ಕೆ ಭೇಟಿ ನೀಡಿ ಪ್ರೋತ್ಸಾಹಿಸಿದರು.

***********

ದಿನಾಂಕ 02–10–2013 ರಂದು ಗಾಂಧಿ ಜಯಂತಿ ಪ್ರಯುಕ್ತ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಉಡುಪಿ ವತಿಯಿಂದ ಮಲ್ಪೆ ಬೀಚ್‌ನ ಗಾಂಧಿ ಪ್ರತಿಮೆಯ ಬಳಿ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು.

ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಶಾಸಕ ಶ್ರೀ ಪ್ರಮೋದ್ ಮಧ್ವರಾಜ್ ಮಾತನಾಡಿ ಗಾಂಧೀಜಿ ಪ್ರಪಂಚದ ಜನಪ್ರಿಯ ವ್ಯಕ್ತಿ. ಅವರ ಆದರ್ಶದ ಶೇ. 10 ರಷ್ಟನ್ನು ನಮ್ಮ ಜೀವನದಲ್ಲಿ ಪಾಲಿಸಿದರೆ ನಮ್ಮ ದೇಶ ಭ್ರಷ್ಟಾಚಾರ, ಗಂಡಾಂತರ, ಹಸಿವುಗಳಿಂದ ಮುಕ್ತವನ್ನಾಗಿಸಿಕೊಳ್ಳಬಹುದಾಗಿದೆ. ಎಂದರು.

ಜಿಲ್ಲಾಧಿಕಾರಿ ಡಾ. ಎಂ.ಟಿ. ರೇಜು, ಪೌರಾಯಕ್ತ ಶ್ರೀಕಾಂತ್ ಭಟ್, ನಗರಸಭಾ ಅಧ್ಯಕ್ಷ ಶ್ರೀ ಯುವರಾಜ್, ಉಪಾಧ್ಯಕ್ಷೆ ಶ್ರೀಮತಿ ಅಮೃತಾ ಕೃಷ್ಣಮೂರ್ತಿ, ಮಲ್ಪೆ ಕೊಡವೂರು ರೋಟರಿ ಅಧ್ಯಕ್ಷೆ ಶ್ರೀಮತಿ ಪೂರ್ಣಿಮಾ ಜನಾರ್ಧನ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಪಾಂಗಾಳ ರವೀಂದ್ರ ನಾಯಕ್, ಶ್ರೀಮತಿ ಜ್ಯೋತಿ ಜೆ. ಪೈ. ಶ್ರೀ ಎಡ್ವಿನ್ ಆಳ್ವ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಕೆ. ಶೇಖರ ಪೂಜಾರಿ ಜಿಲ್ಲಾ ಕಾರ್ಯದರ್ಶಿ, ಶ್ರೀ ಪಿ. ದಯಾನಂದ ಶೆಟ್ಟಿ, ಜಿಲ್ಲಾ ಸ್ಥಾನೀಯ ಆಯಕ್ತರು (ರೋವರ್ಸ್) ಉಪಸ್ಥಿತರಿದ್ದರು.

ವಿವಿಧ ಶಾಲಾ ಕಾಲೇಜುಗಳಿಂದ ಸುಮಾರು 200 ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್ ಭಾಗವಹಿಸಿದ್ದರು. ಪ್ರಾರ್ಥನಾ ಕಾರ್ಯಕ್ರಮದ ಬಳಿಕ ಸ್ಕೌಟ್ಸ್–ಗೈಡ್ಸ್, ರೋವರ್–ರೇಂಜರ್‌ಗಳಿಂದ ಸ್ವಚ್ಛತಾ ಕಾರ್ಯಕ್ರಮ ನಡೆಯಿತು. ಶ್ರೀ ಎಂ. ಪ್ರಭಾಕರ ಭಟ್ ಎ.ಎಸ್.ಓ.ಸಿ., (ಎಸ್) ಹಾಗೂ ಶ್ರೀ ನಿತಿನ್ ಅಮೀನ್ (ಆರ್.ಎಸ್.ಎಲ್.) ಇವರು ಕಾರ್ಯಕ್ರಮವನ್ನು ಸಂಘಟಿಸಿದರು.

## ಬಿಜಾಪುರ

ಶಿಸ್ತು ಸಂಯಮ ಮತ್ತು ಸಮಯಪ್ರಜ್ಞೆ ಮನುಷ್ಯನನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯುತ್ತದೆ ಎಂದು ದೈಹಿಕ ಶಿಕ್ಷಣಾಧಿಕಾರಿ ಶ್ರಿ ಎಸ್.ಬಿ. ಛಲವಾದಿ ಹೇಳಿದರು. ದಿನಾಂಕ 22–08–2013 ರಂದು ಎಮ್.ಜಿ.ಎಮ್.ಕೆ. ಶಾಲೆ ಮುದ್ದೇಬಿಹಾಳದಲ್ಲಿ ಸರ್ವಧರ್ಮ ಪ್ರಾರ್ಥನೆ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ದೀಕ್ಷಾ ಸಮಾರಂಭ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು. ಸಭೆಯಲ್ಲಿ ತಾಲೂಕ ಸಂಸ್ಥೆಯ ಉಪಾಧ್ಯಕ್ಷರು ಹಾಗೂ ಕಾರ್ಯನಿರತ ಪತ್ರಕರ್ತ ಸಂಘದ ತಾಲೂಕಾ ಅಧ್ಯಕ್ಷರಾದ ಶ್ರೀ ಡಿ.ಬಿ. ವಡವಡಗಿ ಅವರು ಮಾತನಾಡಿ

ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಹೆಚ್ಚು ಹೆಚ್ಚು ಮಕ್ಕಳನ್ನು ಸೇರಿಸಲು ಪಾಲಕರು ಹೆಚ್ಚು ಕಾಳಜಿ ತೋರಿಸಬೇಕು ಎಂದರು. ಪ್ರಜಾಪಿತ ಬ್ರಹ್ಮಕುಮಾರಿ ವಿಶ್ವವಿದ್ಯಾಲಯದ ಶ್ರೀಮತಿ ಬಿ.ಕೆ. ಮಂಜುಳಾ ಸಾನಿಧ್ಯ ವಹಿಸಿದ್ದರು. ಸಂಸ್ಥೆ ಅಧ್ಯಕ್ಷ ಶ್ರೀ ವಿ.ಕೆ. ದೇಶಪಾಂಡೆ, ವಕೀಲರ ಸಂಘದ ಅಧ್ಯಕ್ಷ ಶ್ರೀ ಎಂ.ಎಚ್. ಹಾಲಣ್ಣವರ, ಪ್ರಾಚಾರ್ಯರಾದ ಶ್ರೀ ಕೆ. ಆಯ್. ಕೋದನಾಪೂರ, ಮುಖ್ಯ ಗುರುಮಾತೆ ಶ್ರೀಮತಿ ಪಿ.ಜೆ. ಪುರೋಹಿತ, ಉಪಸ್ಥಿತರಿದ್ದರು.

***********

ವಿಜಾಪೂರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅತ್ಯಂತ ಶ್ರಮ ಪಟ್ಟು ಕೆಲಸ ಮಾಡುತ್ತಿದ್ದಾರೆ, ಇದೇ ರೀತಿಯಾಗಿ ಮುಂದೆಯೂ ಕೂಡಾ ಹೆಮ್ಮೆ ತರುವಂತಹ ಕೆಲಸ ಮಾಡಬೇಕೆಂದು ಸಾರ್ವಜನಿಕ ಶಿಕ್ಷಣ ಇಲಾಖೆ ಉಪ ನಿರ್ದೇಶಕರು ಹಾಗೂ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಸಂಗಮೇಶ ಹಳಿಂಗಳಿ ಹೇಳಿದರು.

ಅವರು ಇತ್ತೀಚೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಭವನದಲ್ಲಿ ಪ್ರಧಾನಮಂತ್ರಿ ಪಾರಿತೋಷಕ ಸ್ಪರ್ಧೆಗೆ ಸಂಬಂಧಪಟ್ಟ ಲಾಗ್‌ಬುಕ್‌ಗಳನ್ನು ಮಾಧ್ಯಮದವರ ಮುಂದೆ ಪ್ರದರ್ಶನ ಮಾಡಿ ಸುದ್ದಿಗೋಷ್ಠಿ ನಡೆಸಿದರು. ಸಣ್ಣ ಉಳಿತಾಯ ಹಾಗೂ ರಸ್ತೆ ಸುರಕ್ಷತಾ ನಿಯಮಗಳ ಮೇಲೆ ಪ್ರಾಯೋಗಿಕವಾಗಿ ಕೆಲಸ ಮಾಡಿ ಲಾಗ್ ಪುಸ್ತಕ ತಯಾರಿಸಲಾಗಿದೆ.

ಸುದ್ದಿಗೋಷ್ಠಿಯಲ್ಲಿ ಜಿಲ್ಲಾ ಉಪಾಧ್ಯಕ್ಷರು ಹಾಗೂ ಸಂಯುಕ್ತ ಕರ್ನಾಟಕ ಪತ್ರಿಕೆಯ ಜಿಲ್ಲಾ ವರದಿಗಾರರಾದ ಶ್ರೀ ವಾಸುದೇವ ಹೆರಕಲ್ಲ, ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಭಾಗ್ಯಶ್ರೀ ಸಿಂದಗೀಕರ್, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಸಿದ್ದಣ್ಣ ಸಕ್ರಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ಶರಣು ಸಬರದ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ, ಶ್ರೀ ಸುನೀಲ ಬಿರಾದಾರ ಪಾಟೀಲ ಉಪಸ್ಥಿತಿ ಇದ್ದರು.

*************

ದಿನಾಂಕ 07-09-2013 ರಂದು ಕೆ.ಬಿ.ಎಸ್. ನಂಬರ 30 ವಿವೇಕ ನಗರ ವಿಜಾಪೂರದ ಸುಭಾಸ್ ಚಂದ್ರ ಬೋಸ್ ಸ್ಕೌಟ್ಸ್ ಮುಕ್ತ ದಳದಲ್ಲಿ ಶ್ರೀ ಜಗದೀಶ ಬೋಳಸೂರ ದೀಕ್ಷೆ ನೀಡಿದರು. ದೀಕ್ಷಾ ಸಮಾರಂಭದಲ್ಲಿ ಪಾಲಕರು, ಸರಸ್ವತಿ ಶಿಂಧೆ, ಸಹ ಕಾರ್ಯದರ್ಶಿ ಶರಣು ಸಬರದ, ಜಿಲ್ಲಾ ಸಂಘಟನಾ ಆಯುಕ್ತರಾದ ಸುನೀಲ ಬಿರಾದಾರ ಪಾಟೀಲ, ಸರಸ್ವತಿ ಶಿಂಧೆ, ಸಂಧ್ಯಾ ದೇಶಪಾಂಡೆ, ಮುಖ್ಯ ಗುರುಗಳಾದ ಶ್ರೀಮತಿ ವ್ಹಿ.ಎಸ್. ಓತಿಹಾಳ, ಶ್ರೀಮತಿ ಎಲ್.ಬಿ. ಬಳಗಾನೂರ, ಶ್ರೀ ಸಿ.ಜೆ. ಡೊಣಗಿ, ವ್ಹಿ. ಗುರಬಾಯಿ, ಅತಿಥಿಗಳಾಗಿ ಉಪಸ್ಥಿತರಿದ್ದರು.

*************

ದಿನಾಂಕ 05-09-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮುದ್ದೇಬಿಹಾಳ ಹಾಗೂ ತಾಲ್ಲೂಕಾ ಆಡಳಿತ ಮತ್ತು ಶಿಕ್ಷಣ ಇಲಾಖೆ ಸಂಯುಕ್ತಾಶ್ರಯದಲ್ಲಿ ಸರ್ವಪಲ್ಲಿ ರಾಧಾಕೃಷ್ಣನ್‌ರವರ ಜನ್ಮ ದಿನಾಚರಣೆಯನ್ನು ಶ್ರೀ ವಿಜಯ ಮಾಂತೇಶ್ ಮಂಗಲ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಸಂಗೊಳ್ಳಿ

ರಾಯಣ್ಣ ಸ್ಕೌಟ್ ದಳ, ಸಂತ ಕನಕದಾಸ ಶಾಲೆ ಮುದ್ದೆಬಿಹಾಳ, ಜ್ಞಾನ ಗಂಗೋತ್ರಿ ಪ್ರಾಥಮಿಕ ಶಾಲೆ ಸ್ಕೌಟ್ಸ್ ಮತ್ತು ಗೈಡ್ಸ್ ತಂಡ, ವ್ಹಿ.ಬಿ.ಸಿ. ಪ್ರೌಢಶಾಲೆ, ಮುದ್ದೇಬಿಹಾಳ, ಕೆ.ಬಿ.ಎಮ್.ಪಿ.ಎಸ್. ಮುದ್ದೇಬಿಹಾಳ, ಶ್ರೀ ಶಾರದಾ ಪ್ರಾಥಮಿಕ ಶಾಲೆ ಮಕ್ಕಳು ಭಾಗವಹಿಸಿದ್ದರು. ಶ್ರೀ ಗೋಪಾಲ ಹೂಗಾರ ಸ್ಕೌಟ್ಸ್ ಮಾಸ್ಟರ್, ಶ್ರೀ ಆರ್. ವ್ಹಿ. ಮದಿಹಾಳ, ಶ್ರೀ ಎಲ್.ಎಸ್. ಬೊಮ್ಮನಹಳ್ಳಿ, ಶ್ರೀಮತಿ ಎಸ್.ಜಿ. ಮುತ್ತಪ್ಪನವರ ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎನ್. ವ್ಹಿ. ಹೊಸೂರ, ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಬಿ. ಚಲವಾದಿ ಸ್ಕೌಟ್ಸ್-ಗೈಡ್ಸ್‌ಗಳನ್ನು ಅಭಿನಂದಿಸಿದರು.

************************

ಬಿಜಾಪುರ ತಾಲ್ಲೂಕಿನ ಬುರಾಣಪೂರ ಬಳಿ ನಿರ್ಮಾಣವಾಗುತ್ತಿರುವ ದಿ॥ ಶ್ರೀಮತಿ ವಾಸಂತಿಬಾಯಿ ಜಿಗಜಿನ್ನಿ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರದ ಶಿಲಾನ್ಯಾಸ ಹಾಗೂ ಸಸಿ ನಡೆಸುವ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರಕ್ಕೆ ಹೆಚ್ಚಿನ ಅನುದಾನ ನೀಡಲು ಮಾನ್ಯ ಮುಖ್ಯಮಂತ್ರಿಗಳಿಗೆ ಭೇಟಿ ಮಾಡಿ ವಿನಂತಿಸುತ್ತೇನೆ ಎಂದು ಮಾನ್ಯ ಜಲಸಂಪನ್ಮೂಲ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಂ.ಬಿ. ಪಾಟೀಲ ಹೇಳಿದರು.

ವಿಜಾಪುರದಲ್ಲಿ ತರಬೇತಿ ಕೇಂದ್ರಕ್ಕೆ ವೈಯಕ್ತಿಕವಾಗಿ 2 ಲಕ್ಷ ರೂಗಳನ್ನು ನೀಡುವುದಾಗಿ ತಿಳಿಸಿದರು. ಶಾಸಕರಾದ ಮಾನ್ಯ ಶ್ರೀ ಪ್ರೊ. ರಾಜು ಆಲಗೂರ ಮಾತನಾಡಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರಕ್ಕೆ ಶಾಸಕರ ಅನುದಾನದಲ್ಲಿ 3 ಲಕ್ಷರೂ ಅನುದಾನ ನೀಡಲಾಗುವುದು ಎಂದು ಭರವಸೆ ನಿಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಸತೀಶ ಜಿಗಜಿನ್ನಿ ಅವರು ತರಬೇತಿ ಕೇಂದ್ರಕ್ಕೆ ವೈಯಕ್ತಿಕವಾಗಿ 5 ಲಕ್ಷ ರೂ.ಗಳ ಚೆಕ್ಕನ್ನು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ ಹಸ್ತಾಂತರಿಸಿದರು. ಗ್ರಾಮ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಸುಭದ್ರಾ ಪಾಟೀಲ, ಮಾಜಿ ನಗರ ಸಭೆ ಅಧ್ಯಕ್ಷರಾದ ಶ್ರೀ ಮಿಲಿಂದ ಚಂಚಲಕರ, ಶ್ರೀಮತಿ ಭಾಗ್ಯಶ್ರೀ ಸಿಂದಗಿಕರ ಜಿಲ್ಲಾ ಆಯುಕ್ತರು (ಗೈ) ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಾಸುದೇವ ಹೇರಕಲ್, ಪೂಜಪ್ಪ ಪೂಜಾರಿ ಜಿಲ್ಲಾ ಖಜಾಂಚಿಗಳಾದ ಶ್ರೀ ಎಸ್.ಬಿ. ದಂದರಗಿ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಜಗದೀಶ ಬೋಳಸೂರ, ಸುನೀಲ ಬಿರಾದಾರ ಪಾಟೀಲ ಶ್ರೀಮತಿ ಎಸ್.ಎನ್. ಶಿಂಧೆ ಅರಣ್ಯಾಧಿಕಾರಿಗಳಾದ ಶ್ರೀ ತಾರಾಪ್ರಶಾಂತ್, ಶ್ರೀ ರಮೇಶ ಚವ್ಹಾಣ, ಡಿ.ಎಲ್. ಪಿಂಜಾರಿ ಶ್ರೀಮತಿ ದೇಶಪಾಂಡೆ ಶ್ರೀಮತಿ ಪಿ.ಎಂ. ಪೂಜಾರಿ. ಶ್ರೀಮತಿ ಎಲ್.ಎಂ. ಬಿರಾದಾರ ಆರ್. ಎ. ಪಾಟೀಲ ಮೊದಲಾದವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ಶಿರಸಿ

ದಿನಾಂಕ : 24-08-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಾಂಡೇಲಿ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್ ಮತ್ತು ಗೈಡ್ಸ್ ಪಟಾಲಂ ನಾಯಕತ್ವ ಶಿಬಿರವು ಪರಿಜ್ಞಾನಾಶ್ರಮ ಹಿರಿಯ ಪ್ರಾಥಮಿಕ ಶಾಲೆ, ದಾಂಡೇಲಿಯಲ್ಲಿ ಆಯೋಜಿಸಲಾಗಿತ್ತು. ಸ್ಥಳೀಯ ಸಂಸ್ಥೆಯ ವಿವಿಧ ಶಾಲೆಗಳಿಂದ 80 ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರದಲ್ಲಿ ಭಾಗವಹಿಸಿದ್ದರು

******************

ದಿನಾಂಕ 06-09-2013 ಶಿರಸಿ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್ ಮತ್ತು ಗೈಡ್ಸ್ ಪಟಾಲಂ ನಾಯಕತ್ವ ಮತ್ತು ಕಬ್ಸ್ ಹಾಗೂ ಬುಲ್‌ಬುಲ್ಸ್ ಷಟ್ಕ ನಾಯಕರ ತರಬೇತಿ ಶಿಬಿರವನ್ನು ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಮಾರಿಗುಡಿ, ಶಿರಸಿಯಲ್ಲಿ ಆಯೋಜಿಸಲಾಗಿತ್ತು. ಸ್ಥಳೀಯ ಸಂಸ್ಥೆಯ ವಿವಿಧ ಶಾಲೆಗಳಿಂದ 140 ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ಸ್ ಶಿಬಿರದಲ್ಲಿ ಭಾಗವಹಿಸಿದ್ದರು. ಶ್ರೀ ಪ್ರತೀಮ್ ಕುಮಾರ್ ಶಿಬಿರದ ನಾಯಕರಾಗಿದ್ದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಂ.ಎಸ್. ನಾಯ್ಕ ಶಿಬಿರ ಸಂಘಟನೆಯ ಉಸ್ತುವಾರಿ ವಹಿಸಿದ್ದರು.

************

ದಿನಾಂಕ 06-09-2013 ರಿಂದ 07-09-2013 ರ ವರೆಗೆ ಶಿರಸಿ ಜಿಲ್ಲಾ ಸಂಸ್ಥೆಯ ಸಹಕಾರದೊಂದಿಗೆ ರೋವರ್ಸ್ ಮತ್ತು ರೇಂಜರ್ಸ್ ಮೇಟ್ ಶಿಬಿರವನ್ನು ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಮಾರಿಗುಡಿ ಶಿರಸಿಯಲ್ಲಿ ಆಯೋಜಿಸಲಾಗಿತ್ತು. ಜಿಲ್ಲೆಯ ವಿವಿಧ ಕಾಲೇಜುಗಳಿಂದ 36 ರೋವರ್ಸ್ ಮತ್ತು ರೇಂಜರ್ಸ್ ಶಿಬಿರದಲ್ಲಿ ಭಾಗವಹಿಸಿದ್ದು, ಶ್ರೀ ಪ್ರತೀಮ್ ಕುಮಾರ್ ಕೆ.ಎಸ್. ಶಿಬಿರದ ನಾಯಕರಾಗಿದ್ದರು. ಜಿಲ್ಲಾ ಸಂಘಟಕ ಎಸ್.ಎನ್. ಗೋಪಾಲಕೃಷ್ಣ ಶಿಬಿರವನ್ನು ಸಂಘಟಿಸಿದ್ದರು.

## ಕೊಪ್ಪಳ

ಕೊಪ್ಪಳ ತಾಲ್ಲೂಕ ಸ್ಥಳೀಯ ಸಂಸ್ಥೆಯ ವಾರ್ಷಿಕ ಸಮಾವೇಶವನ್ನು ಶಾರದಾ ಪ್ರೌಢಶಾಲೆಯಲ್ಲಿ ಏರ್ಪಡಿಸಲಾಗಿದ್ದಿತು. ಸಮಾರಂಭದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆ ಕೊಪ್ಪಳ ಅಧ್ಯಕ್ಷರಾದ ಶ್ರೀ ಮಂಜುನಾಥ ಗೊಂಡಬಾಳ್ ವಹಿಸಿದ್ದರು. ಮುಖ್ಯ ಅತಿಥಿ ಸ್ಥಾನದಲ್ಲಿ ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಸಂಧ್ಯಾ ಮಾದಿನೂರ್ ಉಪಸ್ಥಿತರಿದ್ದರು. ಉದ್ಘಾಟನೆಯನ್ನು ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಜನಾರ್ಧನ್ ಹುಲಗಿ ನೆರವೇರಿಸಿದರು. ಅವರು ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಾ ಜಿಲ್ಲಾ ತರಬೇತಿ ಕೇಂದ್ರಕ್ಕೆ ರೂ. 20 ಲಕ್ಷ ಅನುದಾನ ಬಿಡುಗಡೆ ಮಾಡಿರುವುದಾಗಿ ತಿಳಿಸಿದರು. ಶ್ರೀಮತಿ ಸಂಧ್ಯಾ ಮಾದಿನೂರ್ ಮಾತನಾಡುತ್ತ ಕ್ಯಾಂಪ್ ಸೈಟ್‌ನ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಸಹಕಾರ ಕೋರಿದರು. ಶ್ರೀ ಮಂಜುನಾಥ ಗೊಂಡಬಾಳ್ ಮಾತನಾಡಿ ಹೆಚ್ಚು ಹೆಚ್ಚು ಶಾಲೆಗಳ ಸ್ಕೌಟ್-ಗೈಡ್ ದಳವನ್ನು ನಡೆಸುವಂತೆ ತಿಳಿಸಿದರು.

ಸಭೆಯಲ್ಲಿ ಶ್ರೀ ಜಯರಾಜ್ ಬೂಸದ್, ಶ್ರೀ ಯರ್‍ರಣ್ಣ ಹಾಗೂ ಶ್ರೀ ಶಿವಕುಮಾರ್ ಎ.ಎಸ್.ಓ.ಸಿ., ಉಪಸ್ಥಿತರಿದ್ದರು.

***************

ದಿನಾಂಕ 19-09-2013 ರಂದು ಸ್ಥಳೀಯ ಸಂಸ್ಥೆ ಗಂಗಾವತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಭವನದ ಮೇಲಂತಸ್ತಿನ ಅಡಿಗಲ್ಲು ಸಮಾರಂಭ ಹಾಗೂ ನೂತನ ಕೊಠಡಿ ಉದ್ಘಾಟನೆಯನ್ನು ಮಾಡಲಾಯಿತು. ಮೇಲಂತಸ್ತಿನ ಶಂಕು ಸ್ಥಾಪನೆಯನ್ನು ಶ್ರೀ ಸಿದ್ಧರಾಮಸ್ವಾಮಿ ಜಿಲ್ಲಾ ಆಯುಕ್ತರು, ಕೊಪ್ಪಳ ನೆರವೇರಿಸಿದರು. ನೂತನ ಕೊಠಡಿಯನ್ನು ಶ್ರೀ ಶಾಮೀದ ಮೆಲನಿಯಾರ, ನಗರಸಭೆ ಅಧ್ಯಕ್ಷರು, ಗಂಗಾವತಿ ನೆರವೇರಿಸಿದರು. ಲಾರ್ಡ್‌ಬೇಡನ್ ಪೋವೆಲ್ ಭಾವಚಿತ್ರಕ್ಕೆ ಮಾಲಾರ್ಪಣೆಯನ್ನು ಶ್ರೀ ಶರಣೆಗೌಡ, ಸರಕಾರಿ ನೌಕರರ ಸಂಘದ ಅಧ್ಯಕ್ಷರು, ಮಾಡಿದರು. ನಂತರ ನಗರಸಭೆ ಅಧ್ಯಕ್ಷರು ಮಾತನಾಡುತ್ತಾ ಈ ಸಂಸ್ಥೆ ಅಂತರಾಷ್ಟ್ರೀಯ ಚಳುವಳಿಯಾಗಿದೆ ಹಾಗು ಮಕ್ಕಳ ಶ್ರೇಯೋಭಿವೃದ್ಧಿಗೆ ಪೂರಕ, ಹಾಗೂ ಶಿಕ್ಷಣ ಇಲಾಖೆ ಒಳಗೊಂಡಿದೆ

ಎಂದರು ಹಾಗು ಈ ಸ್ಕೌಟ್ ಭವನಕ್ಕೆ 7 ಲಕ್ಷ ರೂಗಳ ಧನಸಹಾಯವನ್ನು ಮತ್ತು ಸ್ಕೌಟ್ ಭವನ ಪಕ್ಕದ ಜಾಗವನ್ನು ಈ ಸಂಸ್ಥೆಗೆ ನೀಡುತ್ತೇನೆ ಎಂದು ಹೇಳಿದರು. ನಂತರ ಶ್ರೀ ಸಿದ್ಧರಾಮಸ್ವಾಮಿ ಜಿಲ್ಲಾ ಆಯುಕ್ತರು ಮಾತನಾಡುತ್ತ, ನಗರಸಭೆಯವರು ಹೆಚ್ಚಿನ ಸಹಾಯ ಧನವನ್ನು ಈ ಸ್ಕೌಟ್ ಭವನಕ್ಕೆ ನೀಡಲು ಕೋರಿದರು. ಸರಕಾರಿ ಪದವಿ ಪೂರ್ವ ಬಾಲಕರ ಕಾಲೇಜಿನ ಶ್ರೀ ಸುರೇಶ್ ಎಸ್.ಡಿ.ಎಂ.ಸಿ. ಅಧ್ಯಕ್ಷರು ಮಾತನಾಡುತ್ತಾ ನಮ್ಮ ಪ್ರೌಢಶಾಲೆಯಲ್ಲಿ ಸ್ಕೌಟ್-ಗೈಡ್ ಚಟುವಟಿಕೆಗಳಿಗೆ ಒತ್ತು ನೀಡುತ್ತೇನೆ ಎಂದರು. ಸ್ಥಳೀಯ ಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಸಂದರ್ಭದಲ್ಲಿ ಹಾಜರಿದ್ದರು.

*************

ದಿನಾಂಕ 04-09-2013 ರಂದು ಗರ್ಲ್ ಗೈಡ್ ಉದಯ ದಿನಾಚರಣೆಯನ್ನು ಸರಸ್ವತಿ ವಿದ್ಯಾಮಂದಿರ ಪ್ರಾಥಮಿಕ ಹಾಗೂ ಪ್ರೌಢಶಾಲೆಯಲ್ಲಿ ಆಚರಿಸಲಾಯಿತು. ಚಿತ್ರಕಲಾ ಸ್ಪರ್ಧೆಯನ್ನು ಗೈಡ್ಸ್‌ಗಳಿಗೆ ಆಯೋಜಿಸಲಾಗಿತ್ತು.

ಮುಖ್ಯ ಅತಿಥಿಗಳಾಗಿ ಶಾಲೆಯ ಮುಖ್ಯ ಗುರುಗಳು ಭಾಗವಹಿಸಿದ್ದರು.

************

ದಿನಾಂಕ 17-09-2013 ರಂದು ಹೈದರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆಯನ್ನು ಆಚರಿಸಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಧ್ವಜಾರೋಹಣ ನಂತರ ಶ್ರೀ ಬಸವರಾಜಯ್ಯ ರವರು ಮಾತನಾಡುತ್ತಾ ಹೈದರಾಬಾದ್-ಕರ್ನಾಟಕ ಹಿಂದಿನ ಇತಿಹಾಸವನ್ನು ವಿಸ್ತಾರವಾಗಿ ಹೇಳಿದರು. ನಂತರ ಜಿಲ್ಲಾ ಕ್ರೀಡಾಂಗಣದ ಪರೇಡ್‌ನಲ್ಲಿ ನಗರದ ವಿವಿಧ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಪರೇಡ್‌ನಲ್ಲಿ ಭಾಗವಹಿಸಿದ್ದರು.

************

ದಿನಾಂಕ 17-09-2013 ರಂದು ನಡೆದ ಹೈದರಾಬಾದ್-ಕರ್ನಾಟಕ ವಿಮೋಚನಾ ದಿನಚರಣೆಯಲ್ಲಿ ಗಂಗಾವತಿ ತಾಲ್ಲೂಕಿನ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ತಾಲ್ಲೂಕು ಕ್ರೀಡಾಂಗಣದ ಪರೇಡ್‌ನಲ್ಲಿ ಭಾಗವಹಿಸಿದ್ದರು.

************

ದಿನಾಂಕ 13-09-2013 ರಂದು ಜಿಲ್ಲಾ ಮಟ್ಟದ ವೃಕ್ಷಮಣಿಧಾರಕರ ಹಾಗೂ ಅಭ್ಯಾಸ ವೃತ್ತ ಪೂರೈಸಿದವರಿಗಾಗಿ ಒಂದು ದಿನದ ಸಮಾವೇಶವನ್ನು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ವಡ್ಡರಹಟ್ಟಿ ಕ್ಯಾಂಪ್ ಗಂಗಾವತಿಯಲ್ಲಿ ನಡೆಸಲಾಯಿತು. ಇದರಲ್ಲಿ ಜಿಲ್ಲೆಯ ಎಲ್ಲಾ ವೃಕ್ಷಮಣಿಧಾರಕರು ಹಾಗೂ ಅಭ್ಯಾಸವೃತ್ತ ಆದವರು ಭಾಗವಹಿಸಿದ್ದರು. ಈ ಸಮಾವೇಶದಲ್ಲಿ ಪ್ರಧಾನ ಮಂತ್ರಿ ಪಾರಿತೋಷಕ, ವಾರಂಟ್, ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಯಿತು. ಈ ಸಮಾವೇಶದಲ್ಲಿ ಶ್ರೀ ವೈ. ಯರ್ರಣ್ಣ ಡಿ.ಟಿ.ಸಿ., (ಎಸ್.) ಶ್ರೀ ಜಯರಾಜ ಬೂಸದ, ಸಹಕಾರ್ಯದರ್ಶಿ, ಎ.ಎಸ್.ಓ.ಸಿ. ಶ್ರೀ ಎ.ಎಸ್. ಶಿವುಕುಮಾರ್ ಹಾಗೂ ಎಲ್.ಎ. ಕಾರ್ಯದರ್ಶಿ ಗಂಗಾವತಿ ಶ್ರೀ ಸಂಗಯ್ಯ ಹಿರೇಮಠ ಭಾಗಹಿಸಿದ್ದರು.

## ಬಾಗಲಕೋಟೆ

ದಿನಾಂಕ 20-09-2013 ರಂದು ಬಾದಾಮಿ ತಾಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಮಾವೇಶವನ್ನು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಆನಂದ ನಗರ. ಬಾದಾಮಿಯಲ್ಲಿ ಜರುಗಿಸಲಾಯಿತು. ಈ ಸಮಾವೇಶದಲ್ಲಿ 76 ಸ್ಕೌಟರ್ಸ್-ಗೈಡರ್ಸ್ ಹಾಜರಿದ್ದರು. ಸಮಾವೇಶದ ಉದ್ಘಾಟನಾ ಸಮಾರಂಭದ

ಅಧ್ಯಕ್ಷತೆಯನ್ನು ತಾಲೂಕು ದೈಹಿಕ ಶಿಕ್ಷಣ ಪರೀಕ್ಷಕರಾದ ಶ್ರೀ ವಿವೇಕಾನಂದ ಮೇಟಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ತಾಲೂಕು ಹಾಗೂ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು. ತಾಲ್ಲೂಕಿನ ಪಿ.ಇ.ಓ., ಆದ ಶ್ರೀ ವಿವೇಕಾನಂದ ಮೇಟಿ ರವರು ಸ್ಕೌಟ್-ಗೈಡ್ ಕುರಿತು ಮಾತನಾಡಿದರು.

**********

ದಿನಾಂಕ 01-10-2013 ರಂದು ಬೀಳಗಿ ತಾಲೂಕಾ ಮಟ್ಟದ ಸ್ಕೌಟರ್ಸ್ ಗೈಡರ್ಸ್ ಸಮಾವೇಶವನ್ನು ಸ್ವಾಮಿ ವಿವೇಕಾನಂದ ಪದವಿ ಪೂರ್ವ ಮಹಾವಿದ್ಯಾಲಯ, ಬೀಳಗಿಯಲ್ಲಿ ಆಯೋಜಿಸಲಾಗಿತ್ತು. ಉದ್ಘಾಟನಾ ಸಮಾರಂಭದ ಘನ ಅಧ್ಯಕ್ಷತೆಯನ್ನು ತಾಲೂಕಾ ಸಂಸ್ಥೆಯ ಅಧ್ಯಕ್ಷರಾದ ಮಾನ್ಯ ಶ್ರೀ ಎಮ್. ಎನ್. ಪಾಟೀಲ ರವರು ವಹಿಸಿಕೊಂಡಿದ್ದರು. ಸಮಾವೇಶದ ಉದ್ಘಾಟನೆಯನ್ನು ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್) ಹಾಗೂ ಬಿ.ಇ.ಓ., ರವರಾದ ಶ್ರೀ ಎಮ್. ಜಿ. ಹಾಸರ ರವರು ನೆರವೇರಿಸಿದರು. ಪ್ರಾಚಾರ್ಯರಾದ ಶ್ರೀ ಡಿ.ಎಸ್. ದಂಡಿ ರವರು ಮುಖ್ಯ ಅತಿಥಿಗಳಾಗಿದ್ದರು. ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಿ ಹಾಗೂ ಜಿಲ್ಲಾ ಸಂಘಟಕರಾದ ಶ್ರೀ ಶರೀಫ ಹತ್ತಿಮತ್ತೂರ ಹಾಗೂ ಶ್ರೀ ಎಸ್.ಆರ್. ಪಾಟೀಲ ಹಿರಿಯ ಸ್ಕೌಟರ್ ಉಪಸ್ಥಿತರಿದ್ದರು.

ಕಾರ್ಯಕ್ರಮದ ಆರಂಭದಲ್ಲಿ ತಾಲ್ಲೂಕಾ ಸ್ಕೌಟ್ಸ್ ಸ್ಥಾನಿಕ ಆಯುಕ್ತ ಶ್ರೀ ಜಿ.ಎಮ. ಮಾಟಲದಿನ್ನಿ ರವರು ಸ್ವಾಗತಿಸಿದರು. ಕೊನೆಯಲ್ಲಿ ಶ್ರೀ ಬಿ.ಪಿ. ತೋರಣಗಟ್ಟಿ ರವರು ವಂದಿಸಿದರು. ತಾಲೂಕಾ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ವಿ.ಆರ್. ಹಿರೇನಿಂಗಪ್ಪನವರ ನಿರೂಪಿಸಿದರು. ಈ ಸಮಾವೇಶದಲ್ಲಿ ಸ್ಕೌಟರ್-ಗೈಡರ್‌ಗಳಿಗೆ ಉಪಯುಕ್ತವಾದ ವಿಷಯಗಳು ಹಾಗೂ ಕೌಶಲಗಳ ಬಗ್ಗೆ ಮಾಹಿತಿ ನೀಡಲಾಯಿತು.

****************

ದಿನಾಂಕ 02-10-2013 ರಂದು ಮಹಾತ್ಮಾಗಾಂಧಿ ಜಯಂತಿಯನ್ನು ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಆಚರಣೆ ಮಾಡಲಾಯಿತು. ಸ್ಥಳೀಯ ಶಾಲೆಯ ಸ್ಕೌಟ್-ಗೈಡ್‌ಗಳು, ಶಾಲೆ ಶಿಕ್ಷಕರು, ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದು ಗಾಂಧೀಜಿ ಯವರ ಆದರ್ಶ ತತ್ತ್ವಗಳನ್ನು ಕುರಿತಾಗಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಹೇಳಲಾಯಿತು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ ಯವರು ಮಾತನಾಡಿದರು. ಸ್ಕೌಟ್-ಗೈಡ್‌ಗಳು ಗಾಂಧೀಜಿಯವರ ಕುರಿತು ಭಾಷಣ ಮಾಡಿದರು. ಕೊನೆಯಲ್ಲಿ ಜಿಲ್ಲಾ ಸಂಘಟಕರು ಶ್ರೀ ಎಸ್.ಹೆಚ್. ಹತ್ತಿಮತ್ತೂರ ವಂದಿಸಿದರು.

******************

ದಿನಾಂಕ 03-10-2013 ರಂದು ಮುಧೋಳ ತಾಲೂಕ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸರಕಾರಿ ಮಾದರಿಯ ಪ್ರಾಥಮಿಕ ಶಾಲೆ ಮುಧೋಳ ಇಲ್ಲಿ ಜರುಗಿಸಲಾಯಿತು. ಸಮಾವೇಶದಲ್ಲಿ ತಾಲೂಕಿನ 84 ಸ್ಕೌಟರ್ಸ್-ಗೈಡರ್ಸ್ ಹಾಜರಿದ್ದರು. ಸ್ಥಳೀಯ ಪದಾಧಿಕಾರಿಗಳು. ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಸಮಾವೇಶದ ಅಧ್ಯಕ್ಷತೆಯನ್ನು ಬಿ.ಇ.ಓ., ಶ್ರೀ ಜಿ.ಎನ್. ಮಠಪತಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕ್ಷೇತ್ರ ಸಮನ್ವಯ ಅಧಿಕಾರಿ ಶ್ರೀ ಹೆಚ್. ಜಿ. ಮಿರ್ಜಿ ಹಾಗೂ ಶ್ರೀ ಎಸ್.ಆರ್. ಪಾಟೀಲ ಸ್ಕೌಟರ್ ತಾಲೂಕಾ ಉಪಾಧ್ಯಕ್ಷರು ಶ್ರೀ ಹೊಸಮನಿ ಹಾಗೂ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಶ್ರೀ ಜಿ.ಎ. ಸಾವಳಗಿ ಜಿಲ್ಲಾ ಕಾರ್ಯದರ್ಶಿ ಪ್ರಾಸ್ತಾವಿಕವಾಗಿ ನುಡಿದರು. ಶ್ರೀ ಜಿ.ಎನ್. ಮಠಪತಿ ರವರು ಸ್ಕೌಟ್-ಗೈಡ್ ಪ್ರತಿಯೊಂದು

ಶಾಲೆಯಲ್ಲಿ ಕಡ್ಡಾಯ. ಶಿಕ್ಷಕರು ದಳ ಪ್ರಾರಂಭಿಸಬೇಕು ಎಂದರು. ಶ್ರೀ ಎಸ್.ಆರ್. ಪಾಟೀಲ, ಶ್ರೀ ಎಮ್.ಬಿ. ಹಿಡಕಲ್, ಶ್ರೀ ಹೆಚ್.ಬಿ. ಭಜಂತ್ರಿ ಜಿಲ್ಲಾ ಸಂಘಟಕರಾದ. ಶ್ರೀ ಎಸ್.ಹೆಚ್. ಹತ್ತಿಮತ್ತೂರ ರವರು ಹಲವು ವಿಷಯಗಳ ಬಗ್ಗೆ ಮಾಹಿತಿ ನೀಡಿದರು. ಶಿಕ್ಷಕ/ಶಿಕ್ಷಕಿಯರಿಗೆ ಮಾಹಿತಿ ಹಾಗೂ ಸಲಹೆಗಳನ್ನು ಹೇಳಲಾಯಿತು. ಕೊನೆಯಲ್ಲಿ ಸ್ಥಳೀಯ ಕಾರ್ಯದರ್ಶಿ ಶ್ರೀ ಆರ್.ಡಿ. ಗಲಗಲಿ ಎಲ್ಲರನ್ನು ವಂದಿಸಿದರು.

## ತುಮಕೂರು

ದಿನಾಂಕ 30-08-2013 ರಿಂದ 01-09-2013 ರ ವರೆಗೆ ಚಾರಣ ಶಿಬಿರವನ್ನು ಜಿಲ್ಲಾ ಸಂಸ್ಥೆ ವತಿಯಿಂದ ನಡೆಸಲಾಯಿತು. ಈ ಶಿಬಿರದಲ್ಲಿ ಸುಮಾರು 120 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ಭಾಗವಹಿಸಿದ್ದರು. ಮಧುಗಿರಿಯ ಐ.ಕೆ. ಕಾಲೋನಿ ಶಾಲೆಯ 20 ಮಕ್ಕಳು ಭಾಗವಹಿಸಿದ್ದರು. ದೇವರಾಯನ ದುರ್ಗ ಬೆಟ್ಟದಲ್ಲಿ ತಂಗಿದ್ದ ಶಿಬಿರಾರ್ಥಿಗಳು ಶ್ರೀ ಭೋಗಾನರಸಿಂಹಸ್ವಾಮಿ ಹಾಗು ಶ್ರೀ ಯೋಗಾನರಸಿಂಹಸ್ವಾಮಿ ದೇವಾಲಯದ ಆವರಣದಲ್ಲಿ ಸುತ್ತಮುತ್ತಾ 2 1/2 ಕಿ.ಮೀ. ನಷ್ಟು ವಿಸ್ತೀರ್ಣದ ಜಾಗವನ್ನು ಸ್ವಚ್ಛ ಗೊಳಿಸಿದರು. ನಂತರ ತಂಡ ತಂಡವಾಗಿ ಟ್ರಾಫಿಕ್ ಕಂಟ್ರೋಲ್, ಟೋಲ್ ಕಂಟ್ರೋಲ್, ದೇವಸ್ಥಾನದಲ್ಲಿ ಸೇವಾಕಾರ್ಯ ಮಾಡಿದರು. ದೇವಸ್ಥಾನದ ಕಲ್ಯಾಣಿಯನ್ನು ಸ್ವಚ್ಛ ಮಾಡಲಾಯಿತು. ಈ ಯಶಸ್ಸಿಗೆ ಕಾರಣರಾದ ಶ್ರೀ ಮಂಜುನಾಥ್, ಶ್ರೀ ಸೋಮಶೇಖರ್, ಶ್ರೀಮತಿ ಅಮೃತ ಬಿಂದುರವರನ್ನು ಜಿಲ್ಲಾ ಸಂಸ್ಥೆ ವತಿಯಿಂದ ಗೌರವಿಸಲಾಯಿತು.

***********

ದಿನಾಂಕ 13-09-2013 ರಂದು ತುಮಕೂರು ನಗರದ ಡಯಟ್ ಸಂಸ್ಥೆಯಲ್ಲಿ **ಜಿಲ್ಲಾ ಸ್ಕೌಟರ್ ಗೈಡರ್ ಸಮಾವೇಶವನ್ನು ನಡೆಸಲಾಯಿತು.** ಈ ಸಮಾವೇಶದಲ್ಲಿ 128 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾಪ್ರಸನ್ನ ಕುಮಾರ್ ರವರು ಕಾರ್ಯಕ್ರಮದ ಉದ್ಘಾಟನೆ ಮಾಡಿದರು. ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ ಉಪ ಪ್ರಾಂಶುಪಾಲರಾದ ಶ್ರೀಮತಿ ಸುಜಾತಾರವರು ಶಿಕ್ಷಕರು ಸ್ಕೌಟ್ಸ್-ಗೈಡ್ಸ್ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸುವಂತೆ ತಿಳಿಸಿದರು. ಹಿರಿಯ ಪ್ರಾಧ್ಯಾಪಕರಾದ ಶ್ರೀ ರಂಗಸ್ವಾಮಿ ಯವರು ಚೈತನ್ಯ ಬೆಳೆಯಬೇಕಾದರೆ ಈ ತರಬೇತಿ ಅವಶ್ಯಕ ಎಂದರು. ಕಾರ್ಯಕ್ರಮದಲ್ಲಿ ಶ್ರೀ ವೇಣುಗೋಪಾಲ್ ಕೃಷ್ಣ ಜಿಲ್ಲಾ ಆಯುಕ್ತರು (ಸ್ಕೌ) ಶ್ರೀಮತಿ ಸುಭಾಷಿಣಿ ಆರ್ ಕುಮಾರ್ ಜಿಲ್ಲಾ ಆಯುಕ್ತರು (ಗೈ) ಕಾರ್ಯದರ್ಶಿ ಶ್ರೀ ಸುರೇಂದ್ರ ಎ. ಷಾ. ಖಜಾಂಚಿ. ಶ್ರೀ ಕಿಶೋರ್ ಕುಮಾರ್ ರವರು ಭಾಗವಹಿಸಿದ್ದರು. ಶ್ರೀ ಕರಿಸಿದ್ಧಪ್ಪ, ಜಿ. ಸಂ. ಶ್ರೀ ಸಿಂದಗೀಕಾಲ್ ಜಿ.ತ.ಆ. ಹಲವಾರು ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

***********

ದಿನಾಂಕ 16-09-2013 ರಂದು ತುರುವೇಕೆರೆ ತಾಲ್ಲೂಕು ದಂಡಿನ ಶಿವರ ಗ್ರಾಮದ ಶ್ರೀ ಹೊನ್ನಾದೇವಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್-ರೇಂಜರ್ ಘಟಕಗಳನ್ನು ಶ್ರೀ ಕೃಷ್ಣಪ್ಪ, ಮಾನ್ಯ ಶಾಸಕರು ಉದ್ಘಾಟಿಸಿದರು. ರೋವರ್ ಲೀಡರ್ ಆದ ಶ್ರೀ ಶ್ರೀನಿವಾಸನ್ ಹಾಗೂ ಪ್ರಾಂಶುಪಾಲರಾದ ಶ್ರೀ ಆನಂದ ರಾವ್ ರವರು ಸ್ಥಳೀಯ ಪದಾಧಿಕಾರಿಗಳು ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

# ಚಿತ್ರದುರ್ಗ

ದಿನಾಂಕ : 11-09-2013 ರಿಂದ 12-09-2013 ರವರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ವತಿಯಿಂದ ಗುರುಭವನದಲ್ಲಿ ಜಿಲ್ಲಾ ಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್ ಸಿಕ್ಸರ್ ಶಿಬಿರ. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗಾಗಿ ಬ್ಯಾಡ್ಜ್ ವರ್ಕ್ಸ್ ತರಬೇತಿ ಶಿಬಿರವನ್ನು ನೆರವೇರಿಸಲಾಯಿತು.

ದಿನಾಂಕ 11-09-2013 ರಂದು ಬೆಳಿಗ್ಗೆ 10 ಗಂಟೆಗೆ ಧ್ವಜಾರೋಹಣದೊಂದಿಗೆ ಶಿಬಿರವು ಅಧಿಕೃತವಾಗಿ ಪ್ರಾರಂಭವಾಯಿತು. ಶಿಬಿರವನ್ನು ಶ್ರೀ ಸುರೇಶರಾಜು ಹಾಗೂ ಶ್ರೀಮತಿ ಹೇಮಂತಿನಿ ಪ್ರಕಾಶ್ ಉದ್ಘಾಟಿಸಿದರು. ಸ್ಕೌಟ್-ಗೈಡ್‌ಗಳಿಗೆ ಶುಭವನ್ನು ಕೋರಿದರು.

ದಿನಾಂಕ 12-09-2013 ರಂದು ಸಂಜೆ ಮುಕ್ತಾಯ ಸಮಾರಂಭದಲ್ಲಿ ಶ್ರೀ ಸುರೇಶರಾಜು ಪಿ.ಎಲ್. ಜಿಲ್ಲಾ ಸ್ಕೌಟ್ ಆಯುಕ್ತರು ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಖಾದರ್ ಖಾನ್ ಉಪಾಧ್ಯಕ್ಷರು ನಗರಸಭೆ ಇವರು ಮುಖ್ಯ ಅತಿಥಿಯಾಗಿ ಸ್ಕೌಟ್-ಗೈಡ್‌ಗಳಿಗೆ ಹಿತವಚನ ನುಡಿದರು. ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್-ಗೈಡ್‌ಗಳು ತಮ್ಮ ಅನಿಸಿಕೆ ವ್ಯಕ್ತಪಡಿದರು.

******************

ದಿನಾಂಕ : 03-10-2013 ರಿಂದ 09-10-2013 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ಹಾಗೂ ಶ್ರೀ ತರಳಬಾಳು ಜಗದ್ಗುರು ವಿದ್ಯಾ ಸಂಸ್ಥೆ ಸಿರಿಗೆರೆ ಇವರ ಸಂಯುಕ್ತ ಆಶ್ರಯದಲ್ಲಿ ಬೃಹನ್ಮಠ, ಸಿರಿಗೆರೆ ಇಲ್ಲಿ ಕಬ್ ಮಾಸ್ಟರ್, ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕರ್ನಾಟಕ ರಾಜ್ಯದ 13 ಜಿಲ್ಲೆಗಳಲ್ಲಿರುವ ಸಿರಿಗೆರೆ ಸಂಸ್ಥೆಯ ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದರು. ಗೈಡ್ ವಿಭಾಗದಲ್ಲಿ 48 ಶಿಬಿರಾರ್ಥಿಗಳು ಕಬ್ ವಿಭಾಗದಲ್ಲಿ 12 ಶಿಬಿರಾರ್ಥಿಗಳು, ಸ್ಕೌಟ್ ವಿಭಾಗದಲ್ಲಿ 72 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಶ್ರೀ ಸಿ.ಎನ್. ಮಹೇಶ್, ಎ.ಎಲ್.ಟಿ.(ಎಸ್.), ಶ್ರೀ ಬಾಬುರಾವ್ ನಿಂಬೂರಿ, ಎ.ಎಲ್.ಟಿ.,(ಎಸ್.) ಸ್ಕೌಟ್ ವಿಭಾಗದ ನಾಯಕರಾಗಿ, ಶ್ರೀ ಎಲ್.ಟಿ. ಲೋಕೇಶ್ ಎಲ್.ಟಿ.(ಸಿ.) ಕಬ್ ವಿಭಾಗದ ನಾಯಕರಾಗಿ, ಶ್ರೀಮತಿ ಮಂಜುಳ ಸಿ. ಎ.ಎಲ್.ಟಿ.(ಜಿ.) ಇವರು ಗೈಡ್ ವಿಭಾಗದ ನಾಯಕರಾಗಿ ತರಬೇತಿ ನೀಡಿದರು.

ದಿನಾಂಕ 03-10-2013 ರಂದು ಬೆಳಿಗ್ಗೆ 10.30ಕ್ಕೆ ಶಿಬಿರದ ಉದ್ಘಾಟನಾ ಸಮಾರಂಭಕ್ಕೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಪ್ರಧಾನ ಆಯುಕ್ತರು ಉದ್ಘಾಟಕರಾಗಿ ಆಗಮಿಸಿ ಶಿಬಿರಾರ್ಥಿಗಳನ್ನು ಪ್ರೋತ್ಸಾಹಿಸಿ ಶುಭ ಹಾರೈಸಿದರು. ಶ್ರೀ ಎಸ್.ಬಿ. ರಂಗನಾಥ ಆಡಳಿತಾಧಿಕಾರಿಗಳು ಬೃಹನ್ಮಠ ಇವರು ಭಾಗವಹಿಸಿ ಹಿತವಚನ ನೀಡಿದರು. ಶ್ರೀ ಹೆಚ್. ಮಂಜುನಾಥ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಚಿತ್ರದುರ್ಗ ಇವರು ಅಧ್ಯಕ್ಷತೆ ವಹಿಸಿ ಕಾರ್ಯಕ್ರಮವನ್ನು ಯಶಸ್ಸಿಗೊಳಿಸಿದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ದಿನಾಂಕ 08-10-2013 ರಂದು ಮುಕ್ತಾಯ ಸಮಾರಂಭವು ನೆರವೇರಿತು. ಈ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಪಿ.ಎಲ್. ಸುರೇಶ್ ರಾಜು ಜಿಲ್ಲಾ ಸ್ಕೌಟ್ ಆಯುಕ್ತರು ವಹಿಸಿದ್ದರು. ಶ್ರೀ ಮದ್ದುಜಯಿನಿ ಸದ್ಧರ್ಮ ಸಿಂಹಾಸನಾಧೀಶ ಶ್ರೀ 1108 ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ದಿವ್ಯ ಸಾನ್ನಿಧ್ಯ ವಹಿಸಿ ಶಿಬಿರಾರ್ಥಿಗಳಿಗೆ ಆಶೀರ್ವಚನ ನೀಡಿದರು. ಶ್ರೀಕೊಂಡಜ್ಜಿ ಬಿ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಶಿಕ್ಷಕಿಯರಿಗೆ ಅಭಿನಂದಿಸಿ ಘಟಕಗಳನ್ನು ಪ್ರಾರಂಭಿಸಲು ತಿಳಿಸಿದರು.

## ರಾಯಚೂರು

ದಿನಾಂಕ 07-09-2013 ರಂದು ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್ ಇವರು ರಾಯಚೂರು ನಗರದ ಗೋಶಾಲ ರಸ್ತೆ, ಇಲ್ಲಿ ಹೊಸದಾಗಿ ಪ್ರಾರಂಭಿಸಿರುವ ಶಾಖೆಯ ಉದ್ಘಾಟನೆ ನಿಮಿತ್ತವಾಗಿ ಬ್ಯಾಂಕಿನಿಂದ 16 ಕಬ್ಸ್ ಸಮವಸ್ತ್ರ, 16 ಸ್ಕೌಟ್ಸ್ ಸಮವಸ್ತ್ರ, ಉಚಿತವಾಗಿ ನೀಡಲಾಯಿತು. ಇದೇ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಗೆ ಬ್ಯಾಂಡ್‌ಸೆಟ್ ಮತ್ತು ಬ್ಯಾಂಡ್‌ಸೆಟ್ ಸಮವಸ್ತ್ರವನ್ನು ನೀಡಲಾಯಿತು. ಬ್ಯಾಂಕಿನ ಎಲ್ಲಾ ಅಧಿಕಾರಿಗಳಿಗೆ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆಯು ಅಭಿನಂದಿಸಿತು. ಬೆಂಗಳೂರು ನೆಟ್‌ವರ್ಕ್‌ನ ಪ್ರಧಾನ ವ್ಯವಸ್ಥಾಪಕ ಪಿ. ಗಣೇಶ ಪೈ. ಗುಲ್ಬರ್ಗಾ ವಲಯದ ಉಪಪ್ರಧಾನ ವ್ಯವಸ್ಥಾಪಕರಾದ ರವೀಂದ್ರಕುಮಾರ ಮುಖ್ಯ ವ್ಯವಸ್ಥಾಪಕರು ಶ್ರೀ ರಾಮಣ್ಣರೆಡ್ಡಿ ಇವರು ಸಮವಸ್ತ್ರಗಳನ್ನು ವಿತರಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಅಜೀಜಾ ಸುಲ್ತಾನ, ಶ್ರೀಮತಿ ಅಲೀಯಾಖಾನಂ, ಜಂಟಿಕಾರ್ಯದರ್ಶಿಗಳು, ಶ್ರೀ ಎಸ್. ಗೋವಿಂದರಾಜು, ಅಧ್ಯಕ್ಷರು, ಸ್ಥಳೀಯ ಸಂಸ್ಥೆ ರಾಯಚೂರು ಶ್ರೀ ಆರ್. ಹೆಚ್. ಸಾಗರ, ಕಾರ್ಯದರ್ಶಿಗಳು, ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು, ಸ್ಥಳೀಯ ಸಂಸ್ಥೆ, ರಾಯಚೂರು, ಶ್ರೀ ಆರ್.ಹೆಚ್. ಸಾಗರ, ಕಾರ್ಯದರ್ಶಿಗಳು, ಶ್ರೀ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌ) ಶ್ರೀಮತಿ ಸುಧಾ. ಜಿ. ಜಿಲ್ಲಾ ಸಂಘಟನಾ ಆಯುಕ್ತರು (ಗೈ) ಶ್ರೀಮತಿ ನಾಗರತ್ನ ಪಾಟೀಲ್, ಹಾಗೂ ವಿವಿದ ಶಾಲೆಗಳ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

****************

ದಿನಾಂಕ 11-09-2013 ರಂದು ನಗರದ ಜೆ.ಸಿ.ಐ. ಸಪ್ತಾಹ ನಿಮಿತ್ತವಾಗಿ ಜೆ.ಸಿ.ಐ. ಹಾಗು ಸ್ಕೌಟ್ಸ್ ಗೈಡ್ಸ್ ಇವರುಗಳ ಸಂಯುಕ್ತಾಶ್ರಯದಲ್ಲಿ ನಗರದ ಮಾವಿನ ಕೆರೆ ಉದ್ಯಾನವನದಿಂದ ಗೋ ಗ್ರೀನ್ ಜನಜಾಗೃತಿ ಸೈಕಲ್ ಜಾಥವನ್ನು ಹಮ್ಮಿಕೊಳ್ಳಲಾಗಿತ್ತು. ಸೈಕಲ್ ಜಾಥಾವನ್ನು ಜೆ.ಸಿ.ಐ., ಜೋನ್ ಅಧ್ಯಕ್ಷ ಜೆ.ಸಿ. ಹೇಮಣ್ಣ ಇವರು ಹಸಿರು ನಿಶಾನೆ ತೋರಿಸುವುದರ ಮೂಲಕ ಉದ್ಘಾಟಿಸಿದರು. ಈ ಜಾಥಾದ ಉದ್ದೇಶ ಜನರಲ್ಲಿ ಪರಿಸರದ ಬಗ್ಗೆ ಕಾಳಜಿ ಮೂಡಿಸಿ ಜನಜಾಗೃತಿ ತರುವುದಾಗಿತ್ತು. ಈ ಸಂದರ್ಭದಲ್ಲಿ ರಾಯಚೂರು ಜೆ.ಸಿ.ಐ. ಅಧ್ಯಕ ರಮಾಕಾಂತ್ ಕಾಳೇಕರ್ ಜೆ.ಸಿ. ವಿನಿತ್ ಬೋಹರಾ, ಕಾರ್ಯದರ್ಶಿಗಳಾದ ಶ್ರೀ ಜೆ.ಸಿ.ಪಿ. ಸತ್ಯನಾರಾಯಣ, ಯೋಜನಾ ಅಧ್ಯಕ್ಷರಾದ ಜೆ.ಸಿ. ಸುರೇಶ ಖಂಡೆಲವಾಲ್. ಶ್ರೀ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶ್ರೀಮತಿ ಸುಧಾ ಜೆ.ಡಿ.ಓ.ಸಿ., (ಗೈ) ಶ್ರೀ ಹನುಮಯ್ಯ ಸ್ಕೌಟ್ ಮಾಸ್ಟರ್ ಬಸಮ್ಮ ಗೈಡ್ ಕ್ಯಾಪ್ಟನ್ ಉಪಸ್ಥಿತರಿದ್ದರು. ಈ ಜಾಥಾದಲ್ಲಿ ಸುಮಾರು 90 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು.

*****************

ದಿನಾಂಕ 12-09-2013 ರಂದು ಕೆ.ಪಿ.ಸಿ.ಎಲ್. ಡಿ.ಎ.ವಿ. ಪಬ್ಲಿಕ್ ಶಾಲೆ, ಶಕ್ತಿನಗರ, ರಾಯಚೂರು ತಾಲ್ಲೂಕ್ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳಿಂದ ಹೊರಸಂಚಾರವನ್ನು ಹಮ್ಮಿಕೊಳ್ಳಲಾಯಿತು. ಶಾಲೆಯ ಪ್ರಾಂಶುಪಾಲರಾದ ಶ್ರೀ ಎ. ರಾಮರಾವ್ ಇವರು ಹೊರಸಂಚಾರಕ್ಕೆ ಚಾಲನೆ ನೀಡಿ ಶುಭಕೋರಿದರು. ಹೊರಸಂಚಾರವು ಶಾಲೆಯಿಂದ ಪ್ರಾರಂಭವಾಗಿ ವನವಿದ್ಯಾ ಸಂಕೇತಗಳನ್ನು ಅನುಸರಿಸುತ್ತ ಸುಮಾರು 05 ಕಿ.ಮೀ. ದೂರದಲ್ಲಿರುವ ವಾಟರ ಪಂಪ್ ಹೌಸ್‌ಗೆ ತಲುಪಿತು. ನಂತರ ಧ್ವಜಾರೋಹಣ ಮಾಡಲಾಯಿತು. ನಂತರ ವಿವಿಧ ಚಟುವಟಿಕೆಗಳನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌಟ್) ಇವರು ವೀಕ್ಷಕರಾಗಿ ಶ್ರೀ ಎ. ರಾಮರಾವ್ ಪ್ರಾಂಶುಪಾಲರು, ಶ್ರೀ ಎ.ಎನ್. ಅಂಗಡಿ ಉಪ ಪ್ರಾಂಶುಪಾಲರು, ಸ್ಕೌಟ್ ಮಾಸ್ಟರುಗಳಾದ ಶ್ರೀ ಕುಮಾರ್ ಮಾನೆ, ಶ್ರೀ ಶರತ್ ಕುಮಾರ, ಶ್ರೀಮತಿ ಶಿರೀನ್ ಗೈಡ್ ಕ್ಯಾಪ್ಟನ್ ಹಾಗೂ 64 ಸ್ಕೌಟ್ಸ್ 32 ಗೈಡ್ಸ್ ಭಾಗವಹಿಸಿದ್ದರು.

*****************

ದಿನಾಂಕ 17-09-2013 ರಂದು ಮಹಾತ್ಮಾ ಗಾಂಧಿ ಜಿಲ್ಲಾ ಕ್ರೀಡಾಂಗಣದಲ್ಲಿ ಹೈದ್ರಾಬಾದ್ - ಕರ್ನಾಟಕ ವಿಮೋಚನಾ ದಿನಾಚರಣೆಯ ಅಂಗವಾಗಿ ಸಾಮೂಹಿಕ ರಾಷ್ಟ್ರಧ್ವಜಾರೋಹಣವನ್ನು ಡಾ॥ ಶರಣ ಪ್ರಕಾಶ ಪಾಟೀಲ್, ಸನ್ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು, ರಾಯಚೂರು ಜಿಲ್ಲಾ ಉಸ್ತುವಾರಿ ಸಚಿವರು ನೆರವೇರಿಸಿದರು. ಈ ಸಂದರ್ಭದಲ್ಲಿ ಸಾಮೂಹಿಕ, ಪಥಚಂಸಲನದಲ್ಲಿ 03 ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿದ್ದರು.

## ಕೋಲಾರ

ಬಂಗಾರಪೇಟೆ ತಾಲ್ಲೂಕಿನ ಮಾವಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರ ಭಗತ್ ಸಿಂಗ್ ಅವರ 106ನೇ ಜನ್ಮದಿನಾಚರಣೆಯನ್ನು ಆಚರಿಸಲಾಯಿತು. ಭಗತ್ ಸಿಂಗ್ ಒಬ್ಬ ಉತ್ತಮ ದೇಶಪ್ರೇಮಿಯಾಗಿದ್ದು, ಭಾರತದ ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣವನ್ನು ತ್ಯಾಗ ಮಾಡಿದ ಧೀಮಂತ ನಾಯಕನಾಗಿದ್ದು ಅವರ ಆದರ್ಶ ಗುಣಗಳನ್ನು ಬೆಳೆಸಿಕೊಳ್ಳಲು ಶಾಲೆಯ ಶಿಕ್ಷಕರಾದ ಶ್ರೀ ಮಹದೇವಸ್ವಾಮಿ ಸ್ಕೌಟ್-ಗೈಡ್‌ಗಳಿಗೆ ಕರೆ ನೀಡಿದರು.

ಇದೇ ಸಂದರ್ಭದಲ್ಲಿ ಸ್ಕೌಟ್ ಮಾಸ್ಟರ್ ಶ್ರೀ ನಂಜುಂಡಪ್ಪನವರ ನಾಯಕತ್ವದಲ್ಲಿ ಶಾಲೆಯಲ್ಲಿ ಭಗತ್‌ಸಿಂಗ್ ಸ್ಕೌಟ್ ದಳವನ್ನು ಪ್ರಾರಂಭಿಸಲಾಯಿತು. ಸ್ಕೌಟ್ ಮತ್ತು ಗೈಡ್ ನಲ್ಲಿ ವಿದ್ಯಾರ್ಥಿಗಳು ಸಕ್ರಿಯವಾಗಿ ತೊಡಗಿಸಿಕೊಂಡು ಉತ್ತಮ ಆದರ್ಶಗಳನ್ನು ಮೈಗೂಡಿಸಿಕೊಳ್ಳುವಂತೆ ಅವರು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು. ಕಾರ್ಯಕ್ರಮದಲ್ಲಿ ಶಾಲೆಯ ಶಿಕ್ಷಕ ಶ್ರೀ ವೆಂಕಟಾಚಲಪತಿ ಮತ್ತು ಮಕ್ಕಳು ಭಾಗವಹಿಸಿದ್ದರು. ಇದೇ ವೇಳೆ ಲೋಕ ಶಿಕ್ಷಣ ಸಂಯೋಜಕರಾದ ಶ್ರೀ ಕೆಂಪೇಗೌಡ ಎಲ್ಲ ಸ್ಕೌಟ್-ಗೈಡ್‌ಗಳಿಗೆ ಸಿಹಿಯನ್ನು ವಿತರಿಸಿದರು.

# Bangalore North

Bangalore North District had organized a Rover Ranger Moot at Muppane Forest, near Sagar Shimoga District from 18th September to 21st September 2013 The Participants were all from the newly formed Rover and Ranger Units of various Colleges in Bangalore North District

The Rovers and Rangers of the following Colleges participated :

| Sl.No. | College | Leader of Unit | No of Participants |
|---|---|---|---|
| 01. | Smt. VHD. Central Institute of Home Science, Sheshadri Road Bangalore-560 001 | Dr. Meraj Bano | 1+34 Rangers |
| 02. | Govt. First Grade College 18th Cross, Malleshwaram Bangalore-560 012 | Smt. S. Shubha<br>Smt. Mukthai | 2+15 Rovers<br>11 Rangers |
| 03. | Govt Science College Nripathunga Road Banglaore-560 001 | Smt. P.Suman<br>Smt. Sandhyarani | 2+10 Rovers<br>12 Rangers |
| 04. | Govt. First Grade College Rajajinagar, Bangalore-560 010 | | 8 Rangers |
| 05. | Govt. First Grade College Hesarghatta, Bangalore | Prof. Harish H. | 1+0 Rovers |
| 06. | SAnmathi Rover Crew Gayatrinagar, Bangalore | Mr. Daniel | 1+4 Rovers |

The Advance party compr ising of Mr. Shankar, ASOC, Mr. Daniel Sukumar, Asst. Secretary, Mr. Vikas, Quartermaster and Mr. Ganapathy, Rover Leader of Tilak Rover Crew reached Sagar on 16th September 2013 for making the necessary arrangements for the Camp. The Participants along with Mr. B.K. Sheshadri, District Secretary arrived on 17th Morning at Talaguppa Railway Station. and were taken to the World Famous Jog Falls, Linganamakki Reservoir and Hydel Power Generating Stations. Finally they arrivd in the Composite at Muppane. The Rangers were allotted Dormitory, and the Rovers were allotted Tents. The Flag was hoisted and the Moot was declared open. The Sessions started with the introduction to Scout Movement. There were Audio Visual Sessions covering the Life of Lord Baden Powell, Rovering to Success, Nature Study, Advancement of Rovers and Rangers, Law and Promise, Vigil etc.,

The Practical Training included Basic Knots, Nature Walk, Daily Campfire, one Cooking Group Discussions, Quiz etc., The last day of the Camp was dedicated to Sightseeing. They were taken to Ikkeri, Keladi, Varadalli, Sigandhur, a ride in the Launch and were dropped back at Sagar Railway Station.

...............ಹಿಂದಿನ ಸಂಚಿಕೆಯಿಂದ

## ಅಧ್ಯಾಯ – 3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ – 9

## ಶಿಬಿರ ಕೌಶಲ್ಯ (CAMP CRAFT)

### ಶಿಬಿರದಲ್ಲಿ ಸೌಖ್ಯ – ಆವರಣ – ಶಿಬಿರ ಸರಂಜಾಮು – ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು – ಶಿಬಿರವನ್ನು ಚೊಕ್ಕಟವಾಗಿಡುವುದು

### ಬೆಂಕಿಯನ್ನು ಹೊತ್ತಿಸುವುದು

ಚೆಕ್ಕೆ ಪುಡಿಯ ಮಧ್ಯ ಭಾಗದಲ್ಲಿ ಕೆಳಗಡೆ ಉರಿಯುತ್ತಿರುವ ಬೆಂಕಿ ಕಡ್ಡಿಯನ್ನು ಇಡಿ. ಬೆಂಕಿಯು ಹತ್ತಿ ಉರಿಯುತ್ತದೆ.

ಸಿಬಿರೆಬ್ಬಿಸಿದ ಕಟ್ಟಿಗೆಯು, ಬೆಂಕಿಯು ಹತ್ತಿ ಉರಿಯಲು ಬಹಳ ಸಹಾಯಕಾರಿಯಾಗುತ್ತದೆ.

ಬೆಂಕಿಯು ಚೆನ್ನಾಗಿ ಉರಿಯಲು ಪ್ರಾರಂಭಿಸಿದ ಮೇಲೆ, ಇನ್ನೂ ದಪ್ಪನೆಯ ಆಬಳಿಕ ಮತ್ತೂ ದಪ್ಪನೆಯ ಸೌದೆ, ಹೀಗೆ ನಿಧಾನವಾಗಿ ಇಡುತ್ತಾ ಹೋಗಬೇಕು. ಇಷ್ಟಾದ ಮೇಲೆ ಕೊನೆಗೆ ದಿಮ್ಮಿಯ ಗಾತ್ರದ, ತುಂಡನ್ನಿಟ್ಟರೂ ಉರಿಯುತ್ತದೆ.

ಕೋಮಲಪಾದನು, ಬೆಂಕಿ ಹೊತ್ತಿಸಿದ ಮೇಲೆ, ಬೆಂಕಕಡ್ಡಿಯನ್ನು, ಪಕ್ಕದಲ್ಲಿ, ನೆಲದ ಮೇಲೆ ಎಸೆಯುತ್ತಾನೆ. ಕಗ್ಗಾಗಿಡಿನವನಾದರೋ ಅದನ್ನು ಮುರಿದು ಹಾಕುತ್ತಾನೆ, ಏಕೆ? ಬೆಂಕಿಕಡ್ಡಿಯು ಇನ್ನೂ ಆರದೇ ಉರಿಯುತ್ತಲೇ ಇದ್ದರೆ, ಅದು ಅವನ ಕೈಯನ್ನು ಸುಟ್ಟು, ಎಸೆಯುವಂತೆ ಮಾಡುತ್ತದೆ.

### ವಿವಿಧ ರೀತಿಯ ಜೋಡಣೆಗಳು

ಅಡಿಗೆಯ ಒಲೆಗೆ ಕೆಂಪಗೆ ಅಡರುವ ಕೆಂಡವನ್ನು ಒಟ್ಟುಹಾಕುವುದು ಮುಖ್ಯವಾದುದು. ಬಳಿಕ ಮೂರು ದಪ್ಪನೆಯ ಸೌದೆ ಸೀಳುಗಳನ್ನು, ಕೆಂಡವು ಮಧ್ಯೆ ಇರುವಂತೆ ಚಕ್ರದ ಅರೆಗಳಂತೆ, ನಕ್ಷತ್ರಾಕಾರದಲ್ಲಿ ಜೋಡಿಸಬೇಕು, ಈ ತೆರನಾದ ಬೆಂಕಿಯು ಆರುವುದೆಂಬ ಭಯವಿಲ್ಲ. ಸೌದೆಯು ಉರಿದಂತೆ ಮುಂದಕ್ಕೆ ತಳ್ಳುತ್ತಿದ್ದರಾಯಿತು. ಕೆಂಪೇರಿ ಅಡರುವ ಕೆಂಡವು ತಯ್ಯಾರ್. ಈ ತೆರನಾದ ಜೋಡಣೆಯಲ್ಲಿ, ಹೆಚ್ಚು ಹೊಗೆ ಬರುವುದಿಲ್ಲ ಮತ್ತೊ ಒಲೆಯೂ ಸಣ್ಣದಾಗಿರುತ್ತದೆ.

ರಾತ್ರಿಯ ವೇಳೆ ಬೆಳಕು ಮತ್ತು ಶಾಖಕ್ಕಾಗಿ ಬೆಂಕಿಯನ್ನು ಉರಿಸುವುದುದಾದರೆ, ನಕ್ಷತ್ರ ಒಲೆಗೆ ಜೋಡಿಸುವ ದಪ್ಪಸೌದೆಗಳ ಪೈಕಿ, ಒಂದು ಉದ್ದನೆಯ ಸೌದೆಯನ್ನಿಡಿ. ನೀವು ಮಲಗಿರುವ ಜಾಗದಿಂದಲೇ ಅದನ್ನು ಆಗಾಗ ಮಧ್ಯಕ್ಕೆ ತಳ್ಳುತ್ತಿರಬಹುದು.




CAMP FIRES AND KITCHENS

ಬೆಂಕಿಯು ರಾತ್ರಿ ಪೂರಾ ಉರಿಯುವುದಾದರೆ, ಮೇಲೆ ಸ್ವಲ್ಪ ಬೂದಿ ಮುಚ್ಚಲು ಬಿಡಬೇಕು. ಬೆಳಗಾದ ಮೇಲೆ ಸ್ವಲ್ಪ ಸೌದೆ ಹಾಕಿ, ಬೂದಿಯನ್ನು ಊದಿ, ಉರಿಯನ್ನು ಏಳಿಸಲು ಸುಲಭವಾಗುತ್ತದೆ.

ಉ. ಅಮೆರಿಕಾದಲ್ಲಿ ಗುಡಾರದೊಳಗೆ ಶಾಖವು ಬರುವಂತೆ ಈ ಕೆಳಕಂಡ ರೀತಿಯಲ್ಲಿ "ಪ್ರತಿಬಿಂಬಕ ಒಲೆ" ಯನ್ನು ಜೋಡಿಸುತ್ತಾರೆ.

120. ಸೆಂ. ಮೀ. ಅಂತರದಲ್ಲಿ ಸ್ವಲ್ಪ ಹಿಂದಕ್ಕೆ ವಾಲಿರುವಂತೆ 2 ಗೂಟಗಳನ್ನು ಹೊಡೆಯಿರಿ ಸುಮಾರು 125 ಸೆಂ. ಮೀ. ಉದ್ದ, 14 ಸೆಂ. ಮೀ ದಪ್ಪವಿರುವ, ಕತ್ತರಿಸಿದ ಮರದ ಕೊಂಬೆಗಳನ್ನು. ಈ ಗೂಟಗಳಿಗೆ ಒಂದರ ಮೇಲೊಂದರಂತೆ 3–4 ತುಂಡುಗಳನ್ನು ಒರಗಿಸಿಡಿ. ಇದು ನಿಮ್ಮ ಒಲೆಯ ಪ್ರತಿಬಿಂಬ ನೀಡುವ ಫಲಕದಂತಾಗುತ್ತದೆ. ಈಗ ಫಲಕದೆದುರಿಗೆ 3 ತುಂಡುಗಳನ್ನು ಚಿತ್ರದಲ್ಲಿ ತೋರಿಸುವಂತೆ ಜೋಡಿಸಿ. ಇದು ಬೆಂಕಿಯು ಹರಡದಂತೆ ಕಾಪಾಡುತ್ತದೆ. ಈ ಚೌಕಟ್ಟಿನೊಳಗೆ, ಪಿರಮಿಡ್ಡಿನಾಕಾರದ ಜೋಡಣೆ ಮಾಡಿ, ಬೆಂಕಿಯನ್ನು ಉರಿಸಿ. ಈ ರೀತಿಯ ಜೋಡಣೆಯಲ್ಲಿ ಹೆಚ್ಚು ಶಾಖವು ದೊರಕುತ್ತದೆ. ಬೀಸುಗಾಳಿಗೆ ಎದುರಿರುವಂತೆ, ಚೌಕಟ್ಟನ್ನು ಜೋಡಿಸಬೇಕು.

ಪ್ರತಿಬಿಂಬಕ ಒಲೆಯನ್ನು ಉ. ಅಮೆರಿಕಾದಲ್ಲಿ ವಿಶೇಷವಾಗಿ ಚಳಿಗಾಲದ ರಾತ್ರಿಗಳಲ್ಲಿ ಉಪಯೋಗಿಸುತ್ತಾರೆ. ಇದು ಗುಡಾರದೊಳಗೆ ಬೆಚ್ಚಗಿರಲು ಸಹಾಯಕವಾಗುತ್ತದೆ.

..........ಮುಂದುವರೆಯುತ್ತದೆ



## ಶ್ರದ್ಧಾಂಜಲಿ

**ಶ್ರೀ ರತ್ನಾಕರ ಡಿ. ವನಕುದ್ರೆ, ವ್ಯವಸ್ಥಾಪಕರು** (ನಿವೃತ್ತ) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ದಿನಾಂಕ 15-09-2013 ರಂದು ತಮ್ಮ 86ನೇ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ನಿಧನ ಹೊಂದಿದರು.

ಧಾರವಾಡದ ಕೆ.ಸಿ.ಸಿ. ಬ್ಯಾಂಕಿನಲ್ಲಿ ವೃತ್ತಿ ಜೀವನ ಆರಂಭಿಸಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್‌ನಲ್ಲಿ ಉಪ ಪ್ರಧಾನ ವ್ಯವಸ್ಥಾಪಕರಾಗಿ ನಿವೃತ್ತಿ ಹೊಂದಿದರು. ನಂತರ ಕರ್ನಾಟಕ ರಾಜ್ಯ ಸ್ಕೌಟ್ ಸಂಸ್ಥೆಯ ಕೇಂದ್ರ ಕಛೇರಿಯಲ್ಲಿ ಹಾಗೂ ಬೆಂಗಳೂರಿನ ತ್ಯಾಗರಾಜ ಸಹಕಾರಿ ಬ್ಯಾಂಕ್‌ನಲ್ಲಿ ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿದರು.

ಇವರು ಇಬ್ಬರು ಗಂಡುಮಕ್ಕಳು, ಒಬ್ಬ ಮಗಳು, ಸೊಸೆಯಂದಿರು, ಮೊಮ್ಮಕ್ಕಳು ಅಪಾರ ಬಂಧು ಬಳಗ ಹಾಗೂ ಸ್ನೇಹಿತರನ್ನು ಅಗಲಿದ್ದಾರೆ.

**ಅವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಬಂಧು ಮಿತ್ರರಿಗೆ ಅಗಲಿಕೆಯ ದುಃಖವನ್ನು ಭರಿಸಲು ಶಕ್ತಿಯನ್ನು ನೀಡಲೆಂದು ದಯಾಮಯನಾದ ಭಗವಂತನನ್ನು ಪ್ರಾರ್ಥಿಸುತ್ತೇವೆ.**

ರಾಜ್ಯ ಕಾರ್ಯದರ್ಶಿ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine




"ಬೇರೆ ಬೇರೆ ಧರ್ಮಗಳು ಮತ್ತು ಪಂಗಡಗಳಲ್ಲಿ ಭಿನ್ನತೆಗಳಿದ್ದರೂ ನಾವೆಲ್ಲರೂ ಪರಸ್ಪರ ಸಹನೆ, ಗೌರವಗಳನ್ನು ರೂಢಿಸಿಕೊಳ್ಳೋಣ, ಇಡೀ ಮಾನವ ಕುಲವೇ ಭಗವಂತನ ಮಕ್ಕಳೆಂದು ತಿಳಿಯೋಣ."

– ಮಹಾತ್ಮಾ ಗಾಂಧೀಜಿ


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು

**29-09-2013ರಂದು ಜರುಗಿದ 95ನೇ ರಾಜ್ಯ ಪರಿಷತ್ ಸಭೆಯಲ್ಲಿ 2012-2013ನೇ ಸಾಲಿನಲ್ಲಿ ಉತ್ತಮ ಕಾರ್ಯನಿರ್ವಹಣೆ ಮತ್ತು ಸಂಘಟನೆಗಾಗಿ ಕೆಳಕಂಡ ಜಿಲ್ಲೆಗಳಿಗೆ ವಿಭಾಗ ಮಟ್ಟದ ಪರ್ಯಾಯ ಫಲಕ ಹಾಗೂ ಪ್ರಶಸ್ತಿಪತ್ರಗಳನ್ನು ವಿತರಿಸಿ ಗೌರವಿಸಲಾಯಿತು.**

## ಬೆಂಗಳೂರು ವಿಭಾಗ



ಪ್ರಥಮ ಸ್ಥಾನ : ಬೆಂಗಳೂರು ದಕ್ಷಿಣ ಜಿಲ್ಲೆ
ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಬೆಂಗಳೂರು ಉತ್ತರ ಜಿಲ್ಲೆ
ಪ್ರಶಸ್ತಿ ಪತ್ರ



ತೃತೀಯ ಸ್ಥಾನ : ಶಿವಮೊಗ್ಗ
ಪ್ರಶಸ್ತಿ ಪತ್ರ

## ಮೈಸೂರು ವಿಭಾಗ



ಪ್ರಥಮ ಸ್ಥಾನ : ಚಿಕ್ಕಮಗಳೂರು ಜಿಲ್ಲೆ
ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಮೈಸೂರು ಜಿಲ್ಲೆ
ಪ್ರಶಸ್ತಿ ಪತ್ರ



ತೃತೀಯ ಸ್ಥಾನ : ಹಾಸನ
ಪ್ರಶಸ್ತಿ ಪತ್ರ

## ಬೆಳಗಾವಿ ವಿಭಾಗ



ಪ್ರಥಮ ಸ್ಥಾನ : ಧಾರವಾಡ ಜಿಲ್ಲೆ
ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಗದಗ ಜಿಲ್ಲೆ
ಪ್ರಶಸ್ತಿ ಪತ್ರ



ತೃತೀಯ ಸ್ಥಾನ : ಶಿರಸಿ ಜಿಲ್ಲೆ
ಪ್ರಶಸ್ತಿ ಪತ್ರ

## ಗುಲ್ಬರ್ಗ ವಿಭಾಗ



ಪ್ರಥಮ ಸ್ಥಾನ : ರಾಯಚೂರು ಜಿಲ್ಲೆ
ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಗುಲ್ಬರ್ಗ ಜಿಲ್ಲೆ
ಪ್ರಶಸ್ತಿ ಪತ್ರ



ತೃತೀಯ ಸ್ಥಾನ : ಕೊಪ್ಪಳ ಜಿಲ್ಲೆ
ಪ್ರಶಸ್ತಿ ಪತ್ರ

**Regd. as News Paper (Magazine) RNI No : 13348/1959. Postal Regd. No KA/BGW-549/2012-2014**
**Permitted to Post under WPP System. Vide No.: WPP-87.**
**Posted at: Mail Business Centre, Bangalore GPO on 25, 28, 30 Every Month (No. of Pages : 4 + 24 = 28)**



ಗಾಂಧಿಜಯಂತಿ ಪ್ರಯುಕ್ತ 02-10-13 ರಂದು ಉಡುಪಿ ಜಿಲ್ಲಾಡಳಿತ ಹಾಗೂ ಮಲ್ಪೆ ಅಭಿವೃದ್ಧಿ ಸಮಿತಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ಮಲ್ಪೆ ಸಮುದ್ರತೀರದ ಗಾಂಧಿ ಕಟ್ಟೆಯಲ್ಲಿ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಶಾಸಕರಾದ ಶ್ರೀ ಪ್ರಮೋದ್ ಮಧ್ವರಾಜ್ ದೀಪ ಬೆಳಗಿಸಿ ಉದ್ಘಾಟಿಸಿದರು. ಚಿತ್ರದಲ್ಲಿ ಜಿಲ್ಲಾಧಿಕಾರಿ ಡಾ. ಟಿ.ಎಂ. ರೇಜು, ಪೌರಾಯುಕ್ತ ಶ್ರೀ ಶ್ರೀಕಾಂತ್ ಜಾವ್, ನಗರಸಭಾ ಅಧ್ಯಕ್ಷ ಶ್ರೀ ಯುವರಾಜ್ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 19-09-2013 ರಂದು ಕೊಪ್ಪಳ ಜಿಲ್ಲೆ ಗಂಗಾವತಿ ಸ್ಥಳೀಯ ಸಂಸ್ಥೆಯ ಸ್ಕೌಟ್ ಭವನದ ಮೊದಲನೇ ಮಹಡಿ ಶಿಲಾನ್ಯಾಸ ಸಮಾರಂಭದ ಉದ್ಘಾಟನೆಯನ್ನು ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಸಿದ್ಧರಾಮ ಸ್ವಾಮಿ ನೆರವೇರಿಸಿದರು. ಚಿತ್ರದಲ್ಲಿ ಸ್ಕೌಟ್ಸ್ ಮತ್ತು ಸ್ಕೌಟ್‌ರ್ಸಗಳನ್ನು ಕಾಣಬಹುದು.



ದಿನಾಂಕ 01-10-2013 ರಂದು ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನೆಯನ್ನು ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಎಂ.ಎನ್. ಪಾಟೀಲ್ ನೇರವೇರಿಸಿದರು. ಚಿತ್ರದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



18 ರಿಂದ 21 ಸೆಪ್ಟೆಂಬರ್ 2013ರವರೆ ಶಿವಮೊಗ್ಗ ಜಿಲ್ಲೆ ಮುಪ್ಪಾಣೆಯಲ್ಲಿ ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ರೋವರ್-ರೇಂಜರ್ ಮೂಟ್‌ನಲ್ಲಿ ಭಾಗವಹಿಸಿದ್ದ ರೋವರ್ಸ್-ರೇಂಜರ್ಸ್, ಸಿಬ್ಬಂದಿ ವರ್ಗ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.







If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**